# ಪ್ರವಕ್ತರು ಯಾರು?



ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**





# ಪ್ರವಕ್ತರು ಯಾರು?


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ
ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)
(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016
ಪ್ರತಿಗಳು : 1000 **ಬೆಲೆ. 45/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ– ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು– ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಶ್ರೀನಿವಾಸ**–09705864675, **ಲಕ್ಷ್ಮಿನಾರಾಯಣಾಚಾರಿ**–09440556968.

**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**

ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A

Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**

ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).

ಪಿನ್–572150, Cell : 9448177812

**ಶಿವರಾಜ**

(ಸಾ)(ಕಿ) ಕುಕನೂರು (ಪೊ)

ಚಿಕ್ಕಸೂಗುರು (ತಾ), ರಾಯಚೂರು (ಜಿ)

Cell : 98443 69516

**R.S. ವೀರಾಚಾರಿ**

ಕತ್ತರಗುಪ್ಪೆ, ವಾರ್ಡ್.ನೆಂ.–38,

ಬೆಂಗಳೂರು–560085

Cell : 9036982829

**G. ಮನೋಹರ್**

ಮಲ್ಲಸಂದ್ರ, ಟಿ. ದಾಸರಹಳ್ಳಿ

ಬೆಂಗಳೂರು–560057

Cell : 7411459912, 9448452963.

**B. ವಾತ್ಸಲ್ಯ**

ರೈಲ್ವೇ ಸ್ಟೇಷನ್ ಹತ್ತಿರ,

ಪಿ.ಬಿ.ರೋಡ್, ದಾವಣಗೆರೆ–577002

Cell : 9901534677, 8880666529

**ಬಸವರಾಜ ಅಂಗಡಿ**

(ಸಾ) (ಪೊ) ಪೋತ್ನಾಳ,

(ತಾ) ಮಾನವಿ, ರಾಯಚೂರು (ಜಿ)

Cell : 9632418716

**ಸೂರ್ಯ ಪ್ರಕಾಶ**

ಟೈಪ್ 'ಸಿ' (ಸಾ) (ಪೊ) ಶಕ್ತಿನಗರ

(ತಾ), ರಾಯಚೂರು (ಜಿ)

Cell : 9611183107, 9164886981

**ಲೀಲಾವತಿ**

ಮಾರುತಿ ಟೆಂಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097

Cell : 9986369118

**T.V. ರಮಣ**

ಕತ್ತರಗುಪ್ಪೆ, ವಾರ್ಡ್.ನೆಂ. –38,

ಬೆಂಗಳೂರು–560068

Cell : 08970772028, 07411459912, 07406039453

**M. ನಾರಾಯಣರೆಡ್ಡಿ**

(Bsc census department retired supervisor)

ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್,

ಬೆಂಗಳೂರು–560066

Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಪ್ರವಕ್ತರು ಯಾರು?



ವಕ್ತ ಎಂದರೆ ಚೆನ್ನಾಗಿ ಹೇಳುವವನು ಅಥವಾ ಚೆನ್ನಾಗಿ ಮಾತನಾಡುವವನು ಎಂದು ಹೇಳಬಹುದು. ಒಂದು ವಿಷಯವನ್ನು ಕುರಿತು ಚೆನ್ನಾಗಿ ಮಾತನಾಡುವವನನ್ನು ವಕ್ತ ಎಂದು ಹೇಳುತ್ತಿರುತ್ತೇವೆ. ಎಲ್ಲರೂ ಮಾತನಾಡಲಾರರು, ಕೆಲವರು ಮಾತ್ರ ಮಾತನಾಡುವ ಸಾಮರ್ಥ್ಯಹೊಂದಿ ಮಾತನಾಡುವುದರಿಂದ, ಕೆಲವರನ್ನು ಮಾತ್ರವೆ ವಕ್ತರು ಎಂದು ಅನ್ನುತ್ತಿದ್ದೇವೆ. ಹತ್ತುಜನರಲ್ಲಾಗಲಿ, ನೂರುಜನರಲ್ಲಾಗಲಿ ನಿರ್ಭಯವಾಗಿ, ನಿರಾತಂಕವಾಗಿ ಮಾತನಾಡುವ ವಕ್ತರು ಕೆಲವರಿರುವಾಗ, ಅವರಲ್ಲಿ ಮುಖ್ಯವಾದ ವಿಷಯವನ್ನು, ಸಾರಾಂಶವಾದ ವಿಷಯವನ್ನು ಕುರಿತು ಮಾತನಾಡುವವರು ಅಪರೂಪವಾಗಿರುತ್ತಾರೆ. ಅಂತಹವರಲ್ಲಿ ಮುಖ್ಯವಾದವುಗಳಲ್ಲಿ ಅತಿ ಮುಖ್ಯವಾದುದು, ರಹಸ್ಯವಾದವುಗಳಲ್ಲಿ ಅತಿ ರಹಸ್ಯವಾದುದು ಏನಾದರೆ ಇದೆಯೋ, ಅದನ್ನು ಕುರಿತು ಹೇಳುವವನು ಬಹಳ ಅಪರೂಪವಾಗಿರುತ್ತಾನೆ. ಅಂತಹ ಅಪರೂಪವಾದ ವ್ಯಕ್ತಿಯನ್ನು ಮುಖ್ಯವಾದ ವಕ್ತನಾಗಿ ಗುರುತಿಸಿ ಆತನನ್ನು ಪ್ರವಕ್ತ ಎನ್ನುವುದು ನಡೆಯುತ್ತಿದೆ. ಒಂದು ವಿಷಯವನ್ನು ಚೆನ್ನಾಗಿ ವ್ಯಕ್ತಪಡಿಸುವವನನ್ನು ವಕ್ತ ಎಂದು ಅನ್ನುತ್ತಿದ್ದೇವೆ. ವ್ಯಕ್ತಪಡಿಸುವ ವಿಷಯ ಸಾಧಾರಣವಾದುದಾಗಿ ಇರುವುದರಿಂದ, ಆ ವಿಷಯವನ್ನು ಎಷ್ಟು ಚೆನ್ನಾಗಿ ಹೇಳಿದರೂ ಅವನನ್ನು ವಕ್ತ ಎಂದೇ ಕರೆಯುತ್ತಾರೆ. ಎಷ್ಟೋ ನೈಪುಣ್ಯವಾಗಿ ಮಾತನಾಡುವ ಸಾಮರ್ಥ್ಯವಿದ್ದರೂ, ಎಷ್ಟೋ ತಿಳಿವಳಿಕೆಯಿಂದ ಮಾತನಾಡಿದರೂ ಆತನು ಹೇಳುವ ವಿಷಯ ಸರ್ವಸಾಧಾರಣ ವಿಷಯವಾಗಿರುವುದರಿಂದ, ದೊಡ್ಡ ಸಾರಾಂಶವಾದ ವಿಷಯ ಅಲ್ಲದಿರುವುದರಿಂದ ಮಾತನಾಡಿದ ವ್ಯಕ್ತಿಯನ್ನು ವಕ್ತ ಎನ್ನುತ್ತಿದ್ದೇವೆ.

ಪ್ರಪಂಚದಲ್ಲಿ ಎಲ್ಲದಕ್ಕಿಂತ ಮಿಗಿಲಾದ ವಿಷಯವೂ, ಎಲ್ಲಾ ರಹಸ್ಯಗಳಿಗಿಂತ ರಹಸ್ಯವಾದುದು, ತಿಳಿಯುವಂತಹ ವಿದ್ಯೆಗಳಿಗೆಲ್ಲ ಮುಖ್ಯ ವಾದುದು ದೇವರ ಜ್ಞಾನ ಮಾತ್ರವೇ ಇದೆ. ಸರ್ವಸಾಧಾರಣವಲ್ಲದ ಅಸಾಧಾರಣ ವಿಷಯವಾದ ದೈವಜ್ಞಾನವನ್ನು ಹೇಳುವಂತಹ ವಕ್ತನನ್ನು ಪ್ರವಕ್ತ ಎನ್ನುತ್ತಿದ್ದೇವೆ. ಇದರಿಂದ ಎಲ್ಲದಕ್ಕಿಂತ ದೊಡ್ಡದಾದ ಒಂದು ದೈವಜ್ಞಾನ ಹೊರತು ಉಳಿದ

ವಿಷಯಗಳನ್ನು ಹೇಗೆ ಹೇಳಿದರೂ, ಯಾವರೀತಿಯಲ್ಲಿ ಹೇಳಿದರೂ ಹೇಳುವವನನ್ನು ವಕ್ತ ಎಂದು ಅನ್ನಬಹುದೆಂದು ತಿಳಿಯುತ್ತಿದೆ. ಕೇಳಿರುವುದನ್ನಾಗಲಿ, ನೋಡಿರುವುದನ್ನಾಗಲಿ, ಓದಿರುವುದನ್ನಾಗಲಿ ವಿವರಿಸಿ ಹೇಳುವವನನ್ನು ಬೋಧಕನು ಎನ್ನುತ್ತೇವೆ. ತಾನು ಇತರರಿಂದ ಕಲಿತಿರುವುದನ್ನು ಪುನಃ ತಿಳಿಯದವರಿಗೆ ಹೇಳುವವನನ್ನು ಬೋಧಕನು ಎನ್ನುತ್ತೇವೆ. ತಾನು ಇತರರಿಂದ ತಿಳಿದಿರುವುದನ್ನು ತಿಳಿಯದವರಿಗೆ ಹೇಳುವುದನ್ನು ಬೋಧಿಸುವುದು ಎಂದು ಅನ್ನುತ್ತೇವೆ. ಹಾಗೆ ಬೋಧಿಸುವವನನ್ನು ಬೋಧಕನು ಎನ್ನುತ್ತೇವೆ. ತನಗೆ ತಿಳಿದಿರುವುದನ್ನು ತಿಳಿಯದವರಿಗೆ ಹೇಳುವವನನ್ನು ವಕ್ತ ಎಂದು ಸಹಾ ಎನ್ನುತ್ತೇವೆ. ಇದರಪ್ರಕಾರ ವಕ್ತ ಎಂದರೂ, ಬೋಧಕನು ಎಂದರೂ ಒಂದೇ ಎಂದು ತಿಳಿಯುತ್ತಿದೆ. ಬೋಧಕನನ್ನು ವಕ್ತ ಎಂದು ಅನ್ನಬಹುದು. ವಕ್ತನನ್ನು ಬೋಧಕನೆಂದು ಅನ್ನಬಹುದು. ವಕ್ತ ವ್ಯಕ್ತಪಡಿಸುವುದಾಗಲಿ, ಬೋಧಕನು ಬೋಧಿಸುವುದಾಗಲಿ ಅದು ಸರ್ವಸಾಧಾರಣ ಪ್ರಪಂಚ ವಿಷಯವಾಗಿರುತ್ತದೆ.

ತಾನು ಕಲಿತಿರುವುದು, ಇತರರಿಂದ ಕೇಳಿರುವುದಾದ ದೇವರ ಜ್ಞಾನವನ್ನು ತಿಳಿಯದವರಿಗೆ ಬೋಧಿಸುವವನು ಬೋಧಕನೇ ಆದರೂ ಆತನನ್ನು "ಪ್ರಬೋಧಕನು' ಅನ್ನುತ್ತೇವೆ. ಹಾಗೆಯೇ ಪೂರ್ವದಲ್ಲಿ ಇತರರಿಂದ ತಾನು ಕಲಿತಿರುವ ದೈವಜ್ಞಾನ ವಿಷಯಗಳನ್ನು ತಿಳಿಯದವರಿಗೆ ವ್ಯಕ್ತಪಡಿಸುವ(ತಿಳಿಸುವ) ವಕ್ತನನ್ನು 'ಪ್ರವಕ್ತ' ಎಂದು ಎನ್ನುತ್ತೇವೆ. ಹೇಳಲಾದ ವಿಷಯ ಎಲ್ಲದಕ್ಕಿಂತ ಪ್ರತ್ಯೇಕವಾದುದು, ಎಲ್ಲದಕ್ಕಿಂತ ಗುಹ್ಯವಾದುದು. ಆದ್ದರಿಂದ ಹೇಳುವ ಜ್ಞಾನವನ್ನನುಸರಿಸಿ ಹೇಳುವವನನ್ನು ಪ್ರವಕ್ತ ಎಂದು ಅನ್ನುತ್ತೇವೆ. ಪ್ರಪಂಚ ವಿಷಯಗಳನ್ನು ಎಷ್ಟು ಬೋಧಿಸಿದರೂ ಆತನನ್ನು ಬೋಧಕನೆಂದೇ ಕರೆಯುತ್ತೇವೆ. ದೈವ ವಿಷಯಗಳನ್ನು ಸ್ವಲ್ಪ ಬೋಧಿಸಿದರೂ ಅವನನ್ನು ಪ್ರವಕ್ತ ಎಂದೇ ಕರೆಯುತ್ತೇವೆ. ಪ್ರಪಂಚ ವಿಷಯಗಳನ್ನು ಬೋಧಿಸುವವನಾಗಲಿ, ದೈವ ವಿಷಯಗಳನ್ನು ಬೊಧಿಸುವವನಾಗಲಿ, ಇಬ್ಬರೂ ಬೋಧಕರೇ ಆಗುತ್ತಾರೆ. ಆದರೆ ಪ್ರಪಂಚ ವಿಷಯಗಳನ್ನು ಬೋಧಿಸುವವನನ್ನು ವಕ್ತ ಎಂದೂ, ಪರಮಾತ್ಮ

ವಿಷಯಗಳನ್ನು ಬೋಧಿಸುವವನನ್ನು ಪ್ರವಕ್ತ ಎಂದು ಅನ್ನುವುದು ನಡೆಯುತ್ತಿದೆ. ಈ ಪದ್ಧತಿ ಪ್ರಕಾರ ಯಾರಾದರು ವಕ್ತರೂ ಆಗಬಹುದು. ಹಾಗೇ ಯಾರಾದರೂ ಪ್ರವಕ್ತರೂ ಆಗಬಹುದು. ಈಗ ಕೆಲವರು ಪ್ರಶ್ನಿಸುವುದಕ್ಕೆ ಅವಕಾಶ ಇದೆ. ಅವರ ಪ್ರಶ್ನೆಗಳು ಹೀಗೆ ಇವೆ.

**ಪ್ರಶ್ನೆ :–** ನಮ್ಮದು ಒಂದು ಚಿಕ್ಕ ಹಳ್ಳಿ. ನಮ್ಮ ಊರಿನಲ್ಲಿ ಬಹಳಜನರಿಗೆ ಓದು ಬರುವುದಿಲ್ಲ. ನಮ್ಮ ಊರಿನಲ್ಲಿ ಸರ್ಕಾರಿ ಪಾಠಶಾಲೆ ಸಹ ಇಲ್ಲ. ಆದ್ದರಿಂದ ನಾವು ಸ್ವತಃವಾಗಿ ಒಬ್ಬ ವ್ಯಕ್ತಿಯನ್ನು ಬೋಧಕನನ್ನಾಗಿ (ಟೀಚರ್‌ನನ್ನು) ನಿಯಮಿಸಿಕೊಂಡು ಆತನಿಂದ ಹಗಲಿನ ಸಮಯದಲ್ಲಿ ನಮ್ಮ ಮಕ್ಕಳಿಗೆ ಶಾಲೆಯಲ್ಲಿ ಓದನ್ನು ಹೇಳಿಸುತ್ತಿದ್ದೇವೆ. ರಾತ್ರಿಸಮಯ ದೊಡ್ಡವರಾದ ನಾವು ಆತನಿಂದ ಭಾರತ, ಭಾಗವತ, ರಾಮಾಯಣ ಕಥೆಗಳನ್ನು ಹೇಳಿಸಿಕೊಳ್ಳುತ್ತಿರುತ್ತೇವೆ. ಹಗಲಿನ ಶಾಲೆಯಿಂದ ನಮ್ಮ ಮಕ್ಕಳಿಗೆ ಪ್ರಪಂಚ ಓದು ಬರುತ್ತಿದೆ. ರಾತ್ರಿಸಮಯ ಭಾಗವತವನ್ನು, ರಾಮಾಯಣವನ್ನು ಹೇಳಿಸಿಕೊಳ್ಳುವುದರಿಂದ ನಮಗೆ ಸ್ವಲ್ಪ ದೈವಭಕ್ತಿ ಏರ್ಪಡುತ್ತಿದೆ. ಈ ವಿಧವಾಗಿ ಒಂದುಕಡೆ ನಮ್ಮ ಮಕ್ಕಳು, ಒಂದುಕಡೆ ನಾವು ಅಭಿವೃದ್ಧಿಯಾಗುತ್ತಿದ್ದೇವೆ. ಆದರೆ ನಾವು ನಿಯಮಿಸಿಕೊಂಡ ಟೀಚರ್‌ನನ್ನು (ಬೋಧಕನನ್ನು)ವಕ್ತ ಎಂದು ಹೇಳಬೇಕಾ? ಅಥವಾ ಪ್ರವಕ್ತ ಎಂದು ಹೇಳಬೇಕಾ? ಏನೆಂದು ಹೇಳಬೇಕು?

**ಉ॥** ನೀವು ನಿಯಮಿಸಿಕೊಂಡ ಟೀಚರ್ ಹಗಲು ಮಕ್ಕಳಿಗೆ ಪ್ರಪಂಚ ಪಾಠಗಳು ಹೇಳುತ್ತಿರುವುದರಿಂದ ಆತನನ್ನು ಬೋಧಕನು ಎಂದು ಅನ್ನಬೇಕು. ಆತನು ಬೋಧಕನು ಆಗಿರುವುದರಿಂದ ಆತನನ್ನು ವಕ್ತ ಎಂದು ಅನ್ನಬಹುದು. ಇನ್ನು ರಾತ್ರಿ ಸಮಯದಲ್ಲಿ ಹಿರಿಯರಿಗೆ ಭಾಗವತ, ರಾಮಾಯಣಗಳನ್ನು ಬೋಧಿಸುವುದರಿಂದ ಹಿರಿಯರಲ್ಲಿ ಭಕ್ತಿಭಾವ ಬೆಳೆದಿದೆ. ಭಕ್ತಿ ಭಾವ ಪೂರ್ತಿ ದೇವರಿಗೆ ಸಂಬಂಧಿಸಿರುವುದು ಅಲ್ಲದಿರುವುದರಿಂದ ಅದು ಸಹಾ ದೇವರನ್ನು ಹೊರತುಪಡಿಸಿ ಇರುವ ಪ್ರಪಂಚ ಸಂಬಂಧವೇ ಎಂದು ಅರ್ಥವಾಗುತ್ತಿದೆ.

ಆದ್ದರಿಂದ ಹಿರಿಯರಿಗೆ ಬೋಧಿಸಿರುವುದರಿಂದ ಸಹಾ ಆತನು ವಕ್ತನಾಗಿಯೇ ಹೇಳಲ್ಪಡುತ್ತಾನೆ. ಪ್ರವಕ್ತನಾಗಿ ಹೇಳಲಾಗುವುದಿಲ್ಲ.

**ಪ್ರಶ್ನೆ:–** ಭಕ್ತಿ ಭಾವವನ್ನು ಉಂಟುಮಾಡುವ ಭಾಗವತ, ರಾಮಾಯಣಗಳನ್ನು ಕುರಿತು ಹೇಳಿದರೂ, ಆತನು ಪ್ರವಕ್ತ ಅಲ್ಲದಿರುವಾಗ, ಏನನ್ನು ಕುರಿತು ಹೇಳಿದರೆ ಆತನು ಪ್ರವಕ್ತ ಆಗುತ್ತಾನೆ?

**ಉ ॥** ನಿಮ್ಮ ಊರಿನಲ್ಲಿ ಮಕ್ಕಳಿಗೆ ಓದು, ಹಿರಿಯರಿಗೆ ಭಾಗವತ ರಾಮಾಯಣ ವನ್ನು ಹೇಳುವ ಟೀಚರ್ ಕುಟುಂಬವು ಪಕ್ಕದಲ್ಲಿಯೇ ಇರುವ ನಗರದಲ್ಲಿರುವು ದರಿಂದ ಆತನು ಪ್ರತಿ ಭಾನುವಾರ ತನ್ನ ಕುಟುಂಬದ ಹತ್ತಿರಕ್ಕೆ ಹೋಗಿ ಬರುತ್ತಿದ್ದನು. ಆ ವಿಧವಾಗಿ ಹೋಗಿಬರುವ ಆತನು ಭಾನುವಾರ ರಾತ್ರಿ 8 ಗಂಟೆಯಿಂದ 10 ಗಂಟೆಯವರೆಗು ಅವರ ಮನೆ ಪಕ್ಕದಲ್ಲಿಯೇ ಗುಡಿಯಲ್ಲಿ ಭಗವದ್ಗೀತೆಯನ್ನು ಓದಿ ಹೇಳುವ ಕಾರ್ಯವನ್ನು ಮಾಡುತ್ತಿದ್ದಾನೆ. ಅಲ್ಲಿ ಭಗವದ್ಗೀತೆಯನ್ನು ಓದಿ ಅಲ್ಲಿರುವವರಿಗೆಲ್ಲ ವಿವರವಾಗಿ ಹೇಳುವುದರಿಂದ ಆತನು ಪ್ರವಕ್ತ ಆಗುತ್ತಿದ್ದಾನೆ. ಆತನನ್ನು ಯಾರೂ ಪ್ರವಕ್ತ ಎಂದು ಕರೆಯದಿದ್ದರು ಆತನನ್ನು ನಾವು ಪ್ರವಕ್ತ ಎಂದು ಹೇಳಬೇಕು. ಆತನು 8 ರಿಂದ 10 ಗಂಟೆಯವರೆಗು ಹೇಳಿರುವುದು ದೇವರ ಜ್ಞಾನ. ಭಗವದ್ಗೀತೆ ದೇವರ ಜ್ಞಾನವಾದ್ದರಿಂದ, ಅದನ್ನು ಹೇಳುವವನು ವಕ್ತ ಅಲ್ಲದೆ ಪ್ರವಕ್ತ ಆಗುತ್ತಾನೆಂದು ನಾವು ಮೊದಲೆ ಹೇಳಿಕೊಂಡಿದ್ದೇವೆ. ಹಳ್ಳಿಯಲ್ಲಿ ಸ್ಕೂಲ್‌ಗಳಲ್ಲಿ ಓದು ಹೇಳಿದರೂ, ಊರಿನಲ್ಲಿ ಭಾಗವತವನ್ನು ಹೇಳಿದರೂ, ಅದೆಲ್ಲವೂ ದೇವರಿಗೆ ಸಂಬಂಧಿಸಿದ ಜ್ಞಾನವಲ್ಲ ಆದ್ದರಿಂದ ಅಲ್ಲಿ ವಕ್ತನಾಗಿಯೇ ಹೇಳಬೇಕಾಗಿ ಬಂದಿದೆ. ಈ ವಿಧವಾಗಿ ಒಬ್ಬನೇ ವ್ಯಕ್ತಿ ಕೆಲವುಕಡೆ ವಕ್ತನಾಗಿ ಮತ್ತೆ ಕೆಲವುಕಡೆ ಪ್ರವಕ್ತನಾಗಿ ಹೇಳುವುದಕ್ಕೆ ಕಾರಣ ಆತನು ಹೇಳುತ್ತಿರುವ ಬೋಧನೆ ಎಂದು ತಿಳಿಯಬೇಕು.

**ಪ್ರಶ್ನೆ :–** ಒಬ್ಬ ಸಾಮಾನ್ಯ ಉಪಾಧ್ಯಾಯನು (ಟೀಚರ್) ಭಗವದ್ಗೀತೆಯನ್ನು ಓದಿ ಹೇಳಿದರೆ, ಆತನನ್ನು ಪ್ರವಕ್ತನ ಕೆಳಗೆ ಜಮಕಟ್ಟಿ ಪ್ರವಕ್ತ ಎಂದರೆ, ಆ

ವಿಧವಾಗಿ ಪ್ರವಕ್ತರು ಎಷ್ಟೋ ಆಗುತ್ತಾರೆ. ಆಗ ಎಷ್ಟೋ ಹೆಸರು ಪ್ರಖ್ಯಾತಿಗಳು ಹೊಂದಿದ ಪ್ರವಕ್ತರ ಸಾಲಿನಲ್ಲಿ ಸಾಮಾನ್ಯ ಮನುಷ್ಯರ ಹೆಸರುಗಳು ಸೇರಿಸಿ ಹೇಳುವುದರಿಂದ ದೊಡ್ಡ ಪ್ರವಕ್ತರಿಗೆ ಅಗೌರವ ಅಲ್ಲವೆ?

**ಉ ॥** ಒಂದು ಸೂತ್ರದ ಪ್ರಕಾರ ಪ್ರವಕ್ತರು ಯಾರು ಎನ್ನುವ ವಿಧಾನವನ್ನು ತಿಳಿಸಿದ್ದೇವಾಗಲಿ, ದೊಡ್ಡಪ್ರವಕ್ತರ ಪಕ್ಕದಲ್ಲಿ ಚಿಕ್ಕ ಪ್ರವಕ್ತರನ್ನು ನಿಲ್ಲಿಸಬೇಕೆಂಬ ಉದ್ದೇಶದಿಂದಲ್ಲ. ಸಣ್ಣ ಪ್ರವಕ್ತರನ್ನು ದೊಡ್ಡ ಪ್ರವಕ್ತರ ಪಕ್ಕದಲ್ಲಿ ಸೇರಿಸಿ ಹೇಳಿದರೂ, ಹೇಳದೆ ಹೋದರೂ, ಪ್ರವಕ್ತರು ಪ್ರವಕ್ತರೇ, ವಕ್ತರು ವಕ್ತರೇ. ದೊಡ್ಡ ಪ್ರವಕ್ತರಾಗಲಿ, ಚಿಕ್ಕ ಪ್ರವಕ್ತರಾಗಲಿ ದೇವರ ಜ್ಞಾನವನ್ನು ಹೇಳುವುದರಿಂದಲೇ ಪ್ರವಕ್ತರಾಗಿದ್ದಾರೆಂದು ಮರೆಯಬಾರದು.

**ಪ್ರಶ್ನೆ :–** ಶ್ರೀಕೃಷ್ಣನು ಭಗವಂತನೆಂದು ನೀವೇ ಹೇಳಿದ್ದೀರ. ಗ್ರಂಥದಲ್ಲಿ ಸಹಾ ಭಗವಂತನೆಂದು ಇದೆ. ಕೃಷ್ಣನು ಭಗವದ್ಗೀತೆಯನ್ನು ಹೇಳಿದ್ದಾನೆ. ಭಗವದ್ಗೀತೆ ದೇವರಿಗೆ ಸಂಬಂಧಿಸಿದ ಜ್ಞಾನವನ್ನು ಬೋಧಿಸುತ್ತಿದೆ. ಆದ್ದರಿಂದ ಶ್ರೀಕೃಷ್ಣನನ್ನು ಸೂತ್ರದ ಪ್ರಕಾರ ಪ್ರವಕ್ತನೆಂದು ಎನ್ನಬಹುದು. ಆದರೆ ಅದೇ ಭಗವದ್ಗೀತೆಯನ್ನು ಓದಿ ಹೇಳುವವನು ಪ್ರವಕ್ತ ಆದಾಗ, ಗೀತೆಯನ್ನು ಬರೆದ ಕೃಷ್ಣನಿಗೆ ಸಮಾನವಾಗಿ ಗೀತೆಯನ್ನು ಓದಿದವನನ್ನು ಪ್ರವಕ್ತಯೆಂದು ಹೇಳುವುದು ಸಮಂಜಸವೇನಾ?

**ಉ ॥** ಶ್ರೀಕೃಷ್ಣನು ಗೀತೆಯನ್ನು ಹೇಳಿದ್ದಾನೆ, ಆದ್ದರಿಂದ ಪ್ರವಕ್ತ ಆಗಿದ್ದಾನೆ. ಮನುಷ್ಯ ಗೀತೆಯನ್ನು ಓದಿ ಹೇಳಿದ್ದಾನೆ, ಆದ್ದರಿಂದ ಪ್ರವಕ್ತ ಆಗಿದ್ದಾನೆ. ಇಲ್ಲಿ ಇಲ್ಲದ ಗೀತೆಯನ್ನು ಸೃಷ್ಟಿಸಿ ಹೇಳಿದವನು ಶ್ರೀಕೃಷ್ಣನು. ಸ್ವತಃವಾಗಿ ಜ್ಞಾನವನ್ನು ಹೇಳಿದವನು ದೇವರೇ ಆಗುತ್ತಾನೆ. ಆದ್ದರಿಂದ ಕೃಷ್ಣನನ್ನು ದೇವರು ಎನ್ನುತ್ತಿದ್ದೇವೆ. ಇರುವ ಜ್ಞಾನವನ್ನು ತಿಳಿಯುವವನು ಮನುಷ್ಯನಾಗುತ್ತಾನೆ. ಇರುವ ಜ್ಞಾನವನ್ನು ತಿಳಿದು ವಿವರವಾಗಿ ಹೇಳುವವನು ಪ್ರವಕ್ತನೇ ಎಂದು ಹೇಳಲ್ಪಟ್ಟರು ಆತನು ಮನುಷ್ಯನೇ ಆಗುತ್ತಾನೆ. ದೈವ ಜ್ಞಾನವನ್ನು ಗೀತರೂಪದಲ್ಲಿ ಹೇಳಿದವನು ದೇವರಾದರೆ, ಅದನ್ನು ತಿಳಿದವನು ಮನುಷ್ಯನಾಗುತ್ತಾನೆ. ಆದರೆ ಇಲ್ಲಿ

ದೈವಜ್ಞಾನವನ್ನು ಹೇಳುವುದರಿಂದ ಪ್ರವಕ್ತ ಎಂಬ ಹೆಸರಿನಿಂದ ಇತ್ತ ದೇವರು, ಅತ್ತ ಮನುಷ್ಯ ಸಮಾನವಾಗಿ ಕರೆಯಲ್ಪಟ್ಟರೂ, ಅವರು ಪ್ರವಕ್ತ ಎನ್ನುವ ಹೆಸರಿನಲ್ಲಿ ಸಮಾನವಾದರೂ, ಅವರ ಸ್ಥಾನದಲ್ಲಿ ಒಬ್ಬರು ಪರಮಾತ್ಮ, ಮತ್ತೊಬ್ಬರು ಜೀವಾತ್ಮಯೆಂದು ತಿಳಿಯಬೇಕು. ಪರಮಾತ್ಮ ದೇವರಾದರೆ, ಜೀವಾತ್ಮ ಮನುಷ್ಯ ಆಗುತ್ತಿದ್ದಾನೆ. ಜೀವಾತ್ಮ ದೇವರು ಇಬ್ಬರೂ ಆತ್ಮಗಳೆ ಆದರೂ ಅವರಲ್ಲಿ ತಾರತಮ್ಯಗಳು ಇವೆ. ಒಂದು ಆತ್ಮ ದೊಡ್ಡದಾದ ಪರಮಾತ್ಮವಾಗಿದ್ದು, ಮತ್ತೊಂದು ಆತ್ಮ ಚಿಕ್ಕದಾದ ಜೀವಾತ್ಮವಾಗಿದೆ. ಆದ್ದರಿಂದ ಮುಖ್ಯವಾದ ಸಮಾಚಾರವನ್ನು ಹೇಳುವವರು ಯಾರಾದರೂ ಪ್ರವಕ್ತರು ಆಗಬಹುದಾಗಲಿ, ಪ್ರವಕ್ತರು ಆದಷ್ಟು ಮಾತ್ರಕ್ಕೆ ಎಲ್ಲರೂ ಸಮಾನರಲ್ಲ.

ಉದಾಹರಣೆಗೆ ತಿರುಪತಿ ವೆಂಕಟೇಶ್ವರ ಸ್ವಾಮಿ ದರ್ಶನಾರ್ಥವಾಗಿ ಗುಡಿ ಹೊರಗೆ ಸಾಲಿನಲ್ಲಿ ನಿಂತಿರುವ ಅವರೆಲ್ಲರನ್ನು ಭಕ್ತರೆಂದೇ ಹೇಳಬೇಕು. ಆಗ ಭಕ್ತರೆಂಬ ಪದ ಎಲ್ಲರಿಗೂ ಅನ್ವಯಿಸುತ್ತದೆ. ಆದರೆ ಆ ಸಾಲಿನಲ್ಲಿ ಎಷ್ಟೋಜನ ಬಡವರಿದ್ದಾರೆ, ಧನಿಕರು ಇದ್ದಾರೆ, ಹಾಗೆ ಮಧ್ಯ ತರಗತಿ ಯವರಿದ್ದಾರೆ. ಸಾಲಿನಲ್ಲಿರುವುದರಿಂದ ಎಲ್ಲರನ್ನು ಭಕ್ತರೆಂದೇ ಹೇಳುತ್ತಿದ್ದೇವೆ. ಎಲ್ಲರೂ ಭಕ್ತರೆಂದು ಕರೆಯಲ್ಪಟ್ಟಮಾತ್ರಕ್ಕೆ ಶ್ರೀಮಂತನು ಬಡವನಾಗುವುದಿಲ್ಲ, ಬಡವನು ಶ್ರೀಮಂತನಾಗುವುದಿಲ್ಲ. ಇಲ್ಲದಿದ್ದರೆ ಇಬ್ಬರೂ ಸಮಾನ ಧನಿಕರು ಅಲ್ಲ. ಭಕ್ತರೆಂಬ ಹೆಸರು ಎಲ್ಲರಿಗೂ ಅನ್ವಯಿಸಿದಷ್ಟುಮಾತ್ರಕ್ಕೆ, ಅವರ ಆರ್ಥಿಕಪರಿಸ್ಥಿತಿಗಳಲ್ಲಿ ಬದಲಾವಣೆ ಹೇಗೆ ಬರುವುದಿಲ್ಲವೊ, ನಂತರ ಯಾವ ವಿಧವಾಗಿ ಧನಿಕನು ಧನಿಕನಾಗಿಯೇ, ಬಡವನು ಬಡವನಾಗಿಯೇ ಇರುತ್ತಾನೊ, ಅದೇ ರೀತಿ ಪ್ರವಕ್ತರೆಂಬ ಹೆಸರು ದೈವಮಾರ್ಗವನ್ನು ಬೋಧಿಸಿದವರಿಗೆ ಬಂದಾಗ ಪ್ರವಕ್ತರು ಎನ್ನುವ ಹೆಸರು ಇತ್ತ ದೇವರಿಗು ಅತ್ತ ಮನುಷ್ಯನಿಗು ಒಂದೇ ವಿಧವಾಗಿ ಅನ್ವಯಿಸಿದರೂ, ಆತ್ಮಗಳ ವಿಷಯಗಳಲ್ಲಿ ಎಂದಿಗೂ ಸಮಾನರಲ್ಲ. ಎಲ್ಲರೂ ಸಮಾನವಾಗಿ ಪ್ರವಕ್ತರೆಂದು ಕರೆಯಲ್ಪಟ್ಟರೂ, ನಂತರ ಜ್ಞಾನದಲ್ಲಿ ಧನಿಕನಾದ ದೇವರು ದೇವರೇ, ಜ್ಞಾನದಲ್ಲಿ ಬಡವನಾದ ಜೀವಿಯು

ಜೀವಿಯೇ ಆಗುತ್ತಾನೆ. ಪ್ರವಕ್ತರು ಆದಷ್ಟುಮಾತ್ರಕ್ಕೆ ಅವರು ಇವರಾಗಿ, ಇವರು ಅವರಾಗಿ ಬದಲಾಗುವುದಾಗಲಿ ಅಥವಾ ಸಮಾನವಾಗಿ ಬದಲಾಗುವುದಾಗಲಿ ನಡೆಯುವುದಿಲ್ಲ. ಯಾವ ವಿಧವಾಗಿ ಗುಡಿಮುಂದೆ ಭಕ್ತರಾದವರೆಲ್ಲರೂ ಹೇಗೆ ಸಮಾನ ಅಲ್ಲವೊ, ಅದೇ ರೀತಿ ಬೋಧಿಸುವುದರಲ್ಲಿ ಪ್ರವಕ್ತರಾದವರೆಲ್ಲರೂ ಸಮಾನರಲ್ಲ. ಬೋಧಿಸಿದವರಲ್ಲಿ ಭಗವಂತನಾದ ದೇವರು ಇರಬಹುದು. ಪಂಡಿತನಾದ ಮನುಷ್ಯ ಇರಬಹುದು.

**ಪ್ರಶ್ನೆ :–** ಪ್ರವಕ್ತ ಎಂದರೆ ಬಹಳ ದೊಡ್ಡವನೆಂದು, ಯಾರಿಗೂ ತಿಳಿಯದ ಜ್ಞಾನ ತಿಳಿದವನೆಂದು ಭಾವಿಸಿದ್ದೇವೆ. ಈಗ ನೀವು ಹೇಳುವ ಮಾತಿನ ಪ್ರಕಾರ ಭೂಮಿಮೇಲೆ ಪ್ರವಕ್ತರು ಯಾರಾದರೂ ಆಗಬಹುದು. ಎಷ್ಟುಜನರಾದರೂ ಇರಬಹುದು. ಹಾಗಾದರೆ ಪ್ರವಕ್ತರು ಒಬ್ಬರಿಬ್ಬರು ಅಲ್ಲ ಎಷ್ಟುಜನರಾದರೂ ಇರಬಹುದು ಎಂದು ಅರ್ಥವಾಗುತ್ತಿದೆ. ಇದಕ್ಕು ಮೊದಲು ನಮ್ಮ ಭಾವನೆಯಲ್ಲಿ ಒಂದು ಮತಕ್ಕೆ ಒಬ್ಬ ಪ್ರವಕ್ತ ಇರುತ್ತಾನೆಂದು, ಹಿಂದುಗಳಿಗೆ ಶ್ರೀಕೃಷ್ಣನು ಪ್ರವಕ್ತನೆಂದು, ಕ್ರೈಸ್ತರಿಗೆ ಏಸು ಪ್ರವಕ್ತಯೆಂದು, ಮುಸ್ಲಿಮ್‌ರಿಗೆ ಮುಹಮ್ಮದ್‌ರವರು ಪ್ರವಕ್ತಯೆಂದು ಅಂದುಕೊಂಡಿದ್ದೆವು. ನಿಮ್ಮ ಸೂತ್ರದ ಪ್ರಕಾರ ಹಿಂದುಗಳಲ್ಲಿ ಗೀತೆಯನ್ನು ಬೋಧಿಸುವವರು, ಕ್ರೈಸ್ತರಲ್ಲಿ ಬೈಬಲ್ ಜ್ಞಾನವನ್ನು ಬೋಧಿಸುವವರು ಎಲ್ಲರೂ ಪ್ರವಕ್ತರೇ ಎಂದು ತಿಳಿಯುತ್ತಿದೆ. ಅಷ್ಟೇ ಅಲ್ಲವೆ!

**ಉ॥** ಸೂತ್ರಬದ್ಧವಾಗಿ ಗೀತೆಯನ್ನು ಬೋಧಿಸಿದ ಕೃಷ್ಣನನ್ನು, ಅದೇ ಗೀತೆಯನ್ನು ಬೋಧನೆಯಾಗಿ ಹೇಳುತ್ತಿರುವ ಮನುಷ್ಯರನ್ನು ಸಮಾನವಾಗಿ ಪ್ರವಕ್ತ ಎಂದು ಅನ್ನಬಹುದು. ಹಾಗೆಯೇ ಬೈಬಲ್ ಜ್ಞಾನವನ್ನು ಮೊದಲು ಬೋಧಿಸಿದ ಯೇಸುವನ್ನು, ನಂತರ ಬೈಬಲ್ ಬೋಧನೆಯನ್ನು ಬೋಧಿಸುವ ಬೋಧಕನನ್ನು ಸಮಾನವಾಗಿ ಪ್ರವಕ್ತ ಎಂದು ಅನ್ನಬಹುದು. ಅಷ್ಟುಮಾತ್ರಕ್ಕೆ ಶ್ರೀಕೃಷ್ಣನು ಮತ್ತು ಗೀತಾಬೋಧಕನು ಸಮಾನರಲ್ಲ. ಹಾಗೆ ಯೇಸು, ಬೈಬಲ್ ಬೋಧಕರು ಸಮಾನರಲ್ಲ. ಉಪ್ಪು ಕರ್ಪೂರವು ಒಂದೇ ಹೋಲಿಕೆಯಲ್ಲಿ ಕಾಣಿಸಿದರೂ,

ಅವುಗಳ ರುಚಿಗಳು ಬೇರೆಯಾದಂತೆ ಕೃಷ್ಣನು, ಗೀತಾ ಬೋಧಕನು ಇಬ್ಬರೂ ಒಂದೇ ಹೆಸರಿರುವ ಪ್ರವಕ್ತರಾಗಿ ಕಾಣಿಸಿದರೂ, ಪುರುಷರಲ್ಲಿ ಪುಣ್ಯಪುರುಷರು ಬೇರೆಯೆಂಬಂತೆ ಪ್ರವಕ್ತರಲ್ಲಿ ದೇವರು ಬೇರೆ, ಜೀವಿಯು ಬೇರೆಯಾಗಿದ್ದಾರೆ. ದೈವಜ್ಞಾನವನ್ನು ಬೋಧಿಸುವವನು ಪ್ರವಕ್ತ ಎನ್ನುವ ಸೂತ್ರ ದೈವಜ್ಞಾನವನ್ನು ಬೋಧಿಸುವವರಿಗೆಲ್ಲರಿಗು ಅನ್ವಯಿಸಿದರೂ, ಪ್ರವಕ್ತರಲ್ಲಿ ಮನುಷ್ಯಬೇರೆ ದೇವರು ಬೇರೆಯೆಂದು ತಿಳಿಯಬೇಕು.

**ಪ್ರಶ್ನೆ :_** ದೇವದೂತರು ಪ್ರವಕ್ತರು ಅಲ್ಲವಾ?

**ಉ॥** ದೇವದೂತರು ಎನ್ನುವ ಪದ ಪ್ರಸ್ತುತ ಹಿಂದೂಮತದಲ್ಲಿ ಎಲ್ಲಿಯೂ ಇಲ್ಲ. ಯಾರನ್ನಾದರೂ ದೇವತೆಗಳು ಎನ್ನುವುದು ಹೊರತು, ದೇವದೂತರು ಎನ್ನುವ ಪದವನ್ನು ಬಳಸುತ್ತಿಲ್ಲ. ಹಾಗೆ ಇತರ ಮತಗಳಲ್ಲಿ ಪ್ರವಕ್ತರು ಎನ್ನುವ ಮಾತನ್ನು ಬಳಸುತ್ತಿದ್ದಾರೆ, ಆದರೆ ಹಿಂದೂಮತದಲ್ಲಿ ಬಳಸುತ್ತಿಲ್ಲ. ಹಿಂದೂಮತದಲ್ಲಿ ಕೆಲವರು ಜ್ಞಾನಿಗಳಾದವರು ದೂತ, ಅವದೂತ ಎನ್ನುವ ಪದಗಳನ್ನು ಬಳಸುತ್ತಿದ್ದಾರೆ. ಮತಿಸ್ಥಿಮಿತ ಇಲ್ಲದವರನ್ನು, ಮತಿಭ್ರಮಿಸಿ, ಹುಚ್ಚಿಡಿದು ಬಟ್ಟೆಗಳು ತೆಗೆದುಹಾಕಿ ತಿರುಗುವವರನ್ನು ದೂತರೆಂದು, ಅವದೂತರೆಂದು ಹೇಳುವುದು ನಡೆಯುತ್ತಿದೆ. ಪ್ರಸ್ತುತ ನೀನು ಕೇಳಿದ ಪ್ರಶ್ನೆಗೆ ಉತ್ತರವನ್ನು ನೇರವಾಗಿ ಹೇಳಿದರೆ, ದೈವಜ್ಞಾನವನ್ನು ಬೋಧಿಸುವ ದೇವರನ್ನಾದರೂ ಪ್ರವಕ್ತ ಎಂದು ಅಂದಾಗ, ಜ್ಞಾನವನ್ನು ಹೇಳಿದ ದೇವದೂತ ರನ್ನು ಸಹ ಪ್ರವಕ್ತರೆಂದೇ ಅನ್ನಬೇಕು. ದೇವದೂತರು ಒಂದು ಸಮಯಕ್ಕೆ ಪ್ರವಕ್ತರಾದರೂ, ನಂತರ ಅವರು ಎಂದಿಗೂ ದೇವದೂತರಾಗಿಯೇ ಇರುತ್ತಾರೆ. ಬಹಳಜನ ಹಿಂದೂಗಳಿಗೆ ಪ್ರವಕ್ತರ ವಿವರವಾಗಲಿ, ದೇವದೂತರ ವಿಷಯವಾಗಲಿ ತಿಳಿದಿಲ್ಲವೆಂದು ಹೇಳಬಹುದು. ದೂತರ ವಿಷಯಕ್ಕೆ ಬಂದರೆ ಹಿಂದುಗಳಿಗೆ ಅವದೂತರೆನ್ನುವವರು ಮಾತ್ರ ತಿಳಿಯುತ್ತದೆ. ಅವದೂತರ ವಿಷಯದಲ್ಲಿ ಸಹಾ ಯಾರು ಅವದೂತರೆಂಬ ವಿವರವು ತಿಳಿಯದೆ ಬಟ್ಟೆಗಳು ಧರಿಸದ ನಗ್ನ ಶರೀರರನ್ನು ಅವದೂತರೆಂದುಕೊಳ್ಳುವುದು ನಡೆಯುತ್ತಿದೆ.

**ಪ್ರಶ್ನೆ :-** ದಿಗಂಬರರು ಅವದೂತರು ಅಲ್ಲವಾ?

**ಉ॥** ಎಂದಿಗೂ ಅಲ್ಲ. ದಿಗಂಬರರ ಅರ್ಥ ಬೇರೆ. ಅವದೂತರ ಅರ್ಥ ಬೇರೆಯೆಂದು ತಿಳಿಯಬೇಕು. ದೂತರು ಎಂದರೆ ಸಮಾಚಾರವನ್ನು ತೆಗೆದುಕೊಂಡು ಬರುವವರು. ಅವದೂತರೆಂದರೆ ಅವಧಿಯಿಲ್ಲದ ಪರಮಾತ್ಮ ಜ್ಞಾನವನ್ನು ತೆಗೆದುಕೊಂಡು ಬರುವವನೆಂದು ಅರ್ಥ. ಅವಧಿ ಎಂದರೆ ಎಲ್ಲೆಗಳು ಎಂದು, ಹದ್ದು ಎಂದು ಅರ್ಥ. ಪರಮಾತ್ಮ ಎಲ್ಲೆಗಳು ಇಲ್ಲದಂತೆ ವ್ಯಾಪಿಸಿರುವವನು. ಇಲ್ಲಿಯವರೆಗೆ ಪರಮಾತ್ಮ ಇದ್ದಾನೆಂದು ಹದ್ದು ಏರ್ಪಡಿಸಿ ಹೇಳಲಾರೆವು. ಪರಮಾತ್ಮ ಎಲ್ಲಾಕಡೆ ವ್ಯಾಪಿಸಿರುವವನು, ಆದ ಕಾರಣ ಅಂತಹ ದೇವರ ಸಮಾಚಾರವನ್ನು ತರುವವನನ್ನು ಅವದೂತ ಎನ್ನುವುದು ನಡೆದಿದೆ. ಅವದೂತ ಎಂದರೆ ದೇವರ ಸಮಾಚಾರವನ್ನು ತಂದು ತಿಳಿಸುವವನೆಂದು ಅರ್ಥದಿಂದ ಹೇಳಿಕೊಳ್ಳಬೇಕು. ಇನ್ನು ದಿಗಂಬರರೆಂದರೆ ಬೇರೆ, ಅವರ ಕೆಲಸ ಬೇರೆ. ಸಹಜವಾಗಿ ಬಟ್ಟೆಗಳು ಇಲ್ಲದವರನ್ನು ದಿಗಂಬರರು ಎನ್ನುವುದು ಅಭ್ಯಾಸವಾಗಿದೆ. ಬಟ್ಟೆಗಳನ್ನು ಧರಿಸದವರನ್ನು ನಗ್ನವಾಗಿ ಇರುವವರೆಂದು ಹೇಳಬಹುದು. **ಗ್ನ** ಎಂದರೆ ಮುಚ್ಚಿಟ್ಟುಕೊಳ್ಳುವುದು ಎಂದು ಅರ್ಥ. **ನ** ಎಂದರೆ ಇಲ್ಲ ಎಂದು ಅರ್ಥ. **ನಗ್ನ** ಎಂದರೆ ಮುಚ್ಚಿಟ್ಟುಕೊಳ್ಳದವನೆಂದು ಅರ್ಥ. ಶರೀರವನ್ನು ಮುಚ್ಚಿಟ್ಟುಕೊಳ್ಳುವುದಕ್ಕೆ ಬಟ್ಟೆಗಳು ಧರಿಸದವನನ್ನು ನಗ್ನವಾಗಿರುವವನೆಂದು, ನಗ್ನ ಶರೀರದವನೆಂದು ಎನ್ನುವುದು ನಡೆಯುತ್ತಿದೆ. ಇನ್ನು ಅಂಬರ ಎಂದರೆ ಆಕಾಶವೆಂದು, ಅಂಬರರು ಎಂದರೆ ಆಕಾಶದಲ್ಲಿ ಸಂಚರಿಸುವವರೆಂದು, ದಿಗ ಎಂದರೆ ಇಳಿದುಬಂದವರೆಂದು, ದಿಗಂಬರರು ಎಂದರೆ ಆಕಾಶದಿಂದ ಇಳಿದುಬಂದವರೆಂದು ಅರ್ಥ. ಆಕಾಶದಿಂದ ಇಳಿದುಬಂದ ಗ್ರಹಗಳು, ಭೂತಗಳು ಎಷ್ಟೋ ಮನುಷ್ಯರಿಗೆ ಕಾಣಿಸದಂತೆ ಭೂಮಿಮೇಲೆ ತಿರುಗುತ್ತಿರುವ ಮಾತು ವಾಸ್ತವವೇ, ಆದರೂ ಆ ವಿಷಯ ಯಾರಿಗು ತಿಳಿದಿಲ್ಲವೆಂದೇ ಹೇಳಬಹುದು. ಭೂಮಿಮೇಲೆ ಮನುಷ್ಯರನ್ನು ಹಿಂಸಿಸುವುದಕ್ಕೆ ಕೆಲವು ಭೂತಗಳು, ಗ್ರಹಗಳು ಆಗಾಗ ಇಳಿದುಬಂದು ಮಾಡಬೇಕಾದ ಕಾರ್ಯವನ್ನು ಮಾಡಿ ಪುನಃ ಮೇಲಕ್ಕೆ

ಹೋಗುತ್ತಿರುತ್ತವೆಂದು ನಾವು ಅನೇಕಸಲ ಹೇಳಿದ್ದೇವೆ. ಹಾಗೆ ಬಂದುಹೋಗುವವರನ್ನು ದಿಗಂಬರರು ಎಂದು ಪೂರ್ವದಲ್ಲಿ ಎನ್ನುತ್ತಿದ್ದರು. ಈ ದಿನ ಆ ವಿವರವು ತಿಳಿಯದಿರುವು ದರಿಂದ ದಿಗಂಬರರು ಎಂದರೆ ಬಟ್ಟೆಗಳು ಧರಿಸದ ನಗ್ನ ಶರೀರರೆಂದು ಅಂದುಕೊಳ್ಳುವುದು ನಡೆಯುತ್ತಿದೆ. ಅವಧೂತ ಎನ್ನುವವನು ಯಾರಿಗೂ ತಿಳಿಯದವನಾಗಿ, ಮನುಷ್ಯನ ಆಕಾರದಲ್ಲಿಯೇ ಬಂದು ದೇವರ ಸಮಾಚಾರವನ್ನು ಮನುಷ್ಯರಿಗೆ ತಿಳಿಸಿಹೋಗುತ್ತಾನೆ. ದಿಗಂಬರರು ಎನ್ನುವ ಗ್ರಹಗಳು, ಭೂತಗಳು ಆಕಾಶದಿಂದ ಕಾಣಿಸದಂತೆ ಬಂದು, ಕಾಣಿಸದಂತಿದ್ದು ಸಮಯ ಬಂದಾಗ ಮನುಷ್ಯರನ್ನು ಶಿಕ್ಷೆಗಳಿಗೆ ಗುರಿಮಾಡಿ ಹೋಗುತ್ತಿರುತ್ತಾರೆ. ದೇವರ ಜ್ಞಾನವನ್ನು ತಿಳಿಸುವ ಅವದೂತ ಎನ್ನುವವನು ಅವಧೂತನಾಗಿ ತಿಳಿಯಲ್ಪಡದೆ, ಜ್ಞಾನವನ್ನು ತಿಳಿಸುವುದರಿಂದ ಮೊದಲು ಪ್ರವಕ್ತನಾಗಿ ತಿಳಿಯುತ್ತಾನೆ. ಆದರೆ ಆತನೇ ಅವದೂತ ಎಂದು ಯಾರಿಗು ತಿಳಿಯದು. ಭೂಮಿ ಮೇಲೆ ಸಮಾಚಾರವನ್ನು ತಿಳಿಸುವುದಕ್ಕೆ ಬಂದವರಲ್ಲಿ ಒಂದೊಂದುಬಾರಿ ಸಾಕ್ಷಾತ್ತು ಭಗವಂತನು ಸಹ ಇರಬಹುದು. ಆದರೆ ಈತನು ಇಂತಹವನೆಂದು ಹೇಳುವುದಕ್ಕೆ ಸಾಧ್ಯವಾಗುವು ದಿಲ್ಲ. ಮತ್ತೆ ಕೆಲವು ಸಮಯಗಳಲ್ಲಿ ಖಗೋಳದಲ್ಲಿನ ಗ್ರಹಗಳಾಗಲಿ, ಭೂತ ಗಳಾಗಲಿ ಜ್ಞಾನವನ್ನು ತಿಳಿಸುವವರಾಗಿ ಬಂದರೂ ಅವರು ಯಾರಿಗು ಕಾಣಿಸದೆ ತಮಗೆ ತಿಳಿದ ಜ್ಞಾನವನ್ನು ತಿಳಿಸಿಹೋಗುತ್ತಾರೆ.

ಭೂಮಿಮೇಲೆ ದೇವರು ತನ್ನ ಜ್ಞಾನವನ್ನು ತಿಳಿಸುವ ವಿಧಾನಗಳು ಮೂರು ಇವೆ. ಅದರಲ್ಲಿ ಮೊದಲನೆಯದು ವಾಣಿ ಮೂಲಕ (ಆಕಾಶವಾಣಿ ಮೂಲಕ) ತಿಳಿಸುವುದು. ಎರಡನೆಯದು ತೆರೆ ಹಿಂಬದಿಯಿಂದ ಕಾಣಿಸದಂತಿದ್ದು ಹೇಳುವುದು. ಮೂರನೆಯದು ತನ್ನ ದೂತನನ್ನು ಕಳುಹಿಸಿ ಆತನ ಮೂಲಕ ಹೇಳಿಸುವುದು. ಈ ಮೂರು ವಿಧಾನಗಳಲ್ಲಿ ದೂತಮೂಲಕ ಹೇಳಿಸುವುದನ್ನು ಭಗವಂತನ ಮೂಲಕ ಹೇಳಿಸುವುದೆಂದು ಅರ್ಥಮಾಡಿಕೊಳ್ಳಬೇಕು. ಅದೇ ವಿಧಾನದ ಪ್ರಕಾರ ಕೃಷ್ಣನ ಮೂಲಕ ಭಗವದ್ಗೀತೆಯನ್ನು ಹೇಳಿಸುವುದು ನಡೆದಿದೆ.

ವಾಣಿ ಮೂಲಕ ಹೇಳಿಸುವುದು ಸೃಷ್ಟ್ಯಾದಿಯಲ್ಲಿಯೇ ನಡೆದಿದೆ. ಇನ್ನು ತೆರೆ ಹಿಂಬದಿಯಿಂದ ಹೇಳಿಸುವುದೆಂಬುವುದು ಖುರಾನ್ ಗ್ರಂಥವನ್ನು ಮುಹಮ್ಮದ್ ಪ್ರವಕ್ತರಿಗೆ ಹೇಳಿದಾಗ ನಡೆದಿದೆ. ಜಿಬ್ರಯೇಲ್ ಎನ್ನುವ ಕಾಣಿಸದ ದೂತ (ದೇವದೂತ) ಪ್ರವಕ್ತರಿಗೆ ಹೇಳುವುದು ನಡೆದಿದೆ. ಈ ವಿಧವಾಗಿ ಮೂರು ವಿಧಾನಗಳು ನಡೆದುಹೋಗಿವೆ. ಅಷ್ಟೇ ಅಲ್ಲದೆ ಯಾವಾಗಾದರೂ ದೇವರ ಜ್ಞಾನ ಭೂಮಿಮೇಲೆ ಮನುಷ್ಯರಿಗೆ ತಿಳಿಯಬೇಕೆಂದರೆ ಈ ಮೂರು ವಿಧಾನಗಳ ಮೂಲಕವೇ ತಿಳಿಯುತ್ತದೆ.

**ಪ್ರಶ್ನೆ :–** ಪ್ರಪಂಚದಲ್ಲಿ ಈ ಮೂರು ವಿಧಾನಗಳ ಮೂಲಕವೇ ಜ್ಞಾನ ತಿಳಿಯುತ್ತದೆಂದು ಹೇಳುವುದಕ್ಕೆ ನಿಮ್ಮ ಹತ್ತಿರ ಆಧಾರವಿದೆಯಾ?

**ಉ॥** ನಾವು ಎಂದಿಗೂ ಶಾಸ್ತ್ರ ಆಧಾರವಿಲ್ಲದ ವಿಷಯವನ್ನು ಹೇಳುವುದಿಲ್ಲ. ಪವಿತ್ರ ಖುರ್‌ಆನ್ ಗ್ರಂಥದಲ್ಲಿ 42ನೇ ಸುರಾ, 51ನೇ ಆಯತ್‌ನಲ್ಲಿ ದೇವರು ಮೂರು ವಿಧಗಳ ಜ್ಞಾನವನ್ನು ತಿಳಿಸುವ ವಿಧಾನವನ್ನು ತಿಳಿಸುವುದು ನಡೆದಿದೆ. ಅದು ಹೀಗೆ ಇದೆ ನೋಡಿರಿ. "ಯಾವ ಮಾನವನೊಂದಿಗೆ ದೇವರು ಪ್ರತ್ಯಕ್ಷವಾಗಿ (ಮುಖಾಮುಖಿ) ಸಂಭಾಷಿಸುವುದು ನಡೆಯುವುದಿಲ್ಲ. ಆದರೆ ವಹಿ ಮೂಲಕ, ಅಥವಾ ತೆರೆ ಹಿಂಬದಿಯಿಂದ, ಅಥವಾ ಒಬ್ಬ ದೂತನನ್ನು ಕಳಿಸುವುದರ ಮೂಲಕ ದೇವರು ತನ್ನ ಜ್ಞಾನವನ್ನು ತಿಳಿಸುತ್ತಾನೆ. ಬಂದಿರುವ ದೂತ ಅಲ್ಲಾ ಆಜ್ಞೆಯನ್ನು ಅನುಸರಿಸಿ ಮನುಷ್ಯರು ಕೋರಿದ ಸಂದೇಶವನ್ನು ತಿಳಿಸುತ್ತಾನೆ. ನಿಶ್ಚಯವಾಗಿ ಆತನು ಮಹೋನ್ನತನು, ವಿವೇಕವಂತನು." ಈ ವಿಧವಾಗಿ ದೇವರು ತನ್ನ ಮೂಲ ಗ್ರಂಥಗಳಲ್ಲಿ ಒಂದರಲ್ಲಿ ಹೇಳಿದ್ದರೂ, ಇದು ನಮ್ಮ ಗ್ರಂಥ ಎಂದು ಹೇಳಿಕೊಳ್ಳುವ ಮುಸ್ಲಿಮ್‌ರಲ್ಲಿ ಕೆಲವರಿಗೆ ಈ ವಾಕ್ಯವೊಂದರ ಅರ್ಥ ಸರಿಯಾಗಿ ತಿಳಿಯದಂತಾಗಿದೆ. ನಿಶ್ಚಯವಾಗಿ ಆತನು ಮಹೋನ್ನತನು, ವಿವೇಕವಂತನು ಎನ್ನುವ ಮಾತಿನಲ್ಲಿನ ನಿಜವಾದ ಅಂತರಾರ್ಥವು ಕೆಲವರಿಗೆ ಇಂದಿಗೂ ತಿಳಿಯದೆಂದೇ ಹೇಳಬಹುದು.

**ಪ್ರಶ್ನೆ :–** ದೇವರು ತಿಳಿಸುವ ಮೂರು ಮಾರ್ಗಗಳ ಜ್ಞಾನ ಬೋಧನಾ ರೂಪದಲ್ಲಿಯೇ ಇರುತ್ತದಲ್ಲವೆ!

**ಉ॥** ದೇವರು ಸ್ವತಃವಾಗಿ ಅಲ್ಲದೆ ಮೂರು ಪದ್ಧತಿಗಳ ಮೂಲಕ ಜ್ಞಾನವನ್ನು ತಿಳಿಸುತ್ತಿದ್ದಾನೆ. ಈ ವಿಷಯ ಬಹಳಜನ ಹಿಂದುಗಳಿಗು ಸಹಾ ತಿಳಿಯದು. ಒಂದು ಗ್ರಂಥದಲ್ಲಿ ಹೇಳಲಾದ ವಿಷಯ ಎಲ್ಲರಿಗೂ ಸಂಬಂಧಿಸಿರುವುದೆಂದು ತಿಳಿಯದೆ ಖುರ್‌ಆನ್‌ನಲ್ಲಿ ಹೇಳಿರುವುದು ಮುಸ್ಲಿಮ್‌ರಿಗೆಂದು, ಭಗವದ್ಗೀತೆಯಲ್ಲಿ ಹೇಳಿರುವುದು ಹಿಂದುಗಳಿಗೆಂದು ಎಂದುಕೊಳ್ಳುವುದು ನಡೆಯುತ್ತಿದೆ. ದೇವರು ಯಾವ ಮತದಲ್ಲಿನ ಮನುಷ್ಯರಿಗಾದರೂ ಮೇಲಿನ ಮೂರು ವಿಧಾನಗಳ ಮೂಲಕ ತನ್ನ ಜ್ಞಾನವನ್ನು ತಿಳಿಸುತ್ತಿದ್ದಾನೆ. ಎಲ್ಲಿ ಯಾವ ವಿಧಾನವನ್ನು ಉಪಯೋಗಿಸಿ ಹೇಳಿದರೂ, ಆತನ ಜ್ಞಾನವೆಲ್ಲವೂ ಬೋಧರೂಪದಲ್ಲಿಯೇ ಇರುವಂತೆ ತಿಳಿಯುತ್ತಿದೆ. ದೇವರು ತಿಳಿಸುವ ಬೋಧನೆ ಸಾಧಾರಣ ಬೋಧನೆಯಂತಲ್ಲದೆ ಅದು ಮುಖ್ಯವಾದ ಬೋಧನೆಯಾಗಿ, ಶಾಸ್ತ್ರಬದ್ಧವಾದ ಬೋಧನೆಯಾಗಿ ಇರುತ್ತದೆ. ಅಂತಹ ಬೋಧನೆಗೆ "ಪ್ರ" ಎನ್ನುವ ಅಕ್ಷರವನ್ನು ಸೇರಿಸಿ ಪ್ರಬೋಧಯೆಂದು ಹೇಳಬಹುದು. ಪ್ರ ಎನ್ನುವ ಅಕ್ಷರ ವಿಶೇಷತೆಯನ್ನು ತೋರಿಸುತ್ತದೆ. ಆದ್ದರಿಂದ ದೇವರ ಬೋಧನೆಯನ್ನು ಜ್ಞಾನಿಗಳು ಪ್ರಬೋಧ ಯೆಂದು ಹೇಳುವುದು ನಡೆದಿದೆ. ಪ್ರಬೋಧವನ್ನು ಬೋಧಿಸಿದ ದೂತನಿಗೂ ಸಹ ಪ್ರ ಎನ್ನುವ ಅಕ್ಷರವನ್ನು ಸೇರಿಸಿ "ಪ್ರದೂತ" ಎಂದು ಸಹ ಅಂದಿದ್ದಾರೆ. ಪ್ರದೂತ ಹೇಳಿರುವುದು ಪ್ರಬೋಧಯೆಂದು, ಪ್ರಜ್ಞಾನವೆಂದು ಹೇಳಬಹುದು. "ಪ್ರ" ಪ್ರತ್ಯೇಕತೆಯನ್ನು ಸೂಚಿಸುವುದಾದ್ದರಿಂದ, ದೇವರ ಬೋಧನೆಯನ್ನು ಪ್ರಬೋಧಯೆಂದು, ದೇವರ ಜ್ಞಾನವನ್ನು ಪ್ರಜ್ಞಾನವೆಂದು ಹೇಳುವುದು ನಡೆದಿದೆ.

**ಪ್ರಶ್ನೆ :–** ಭಗವದ್ಗೀತೆಯನ್ನು ಹೇಳಿದ ಕೃಷ್ಣನು ಪ್ರವಕ್ತನಾ, ಅಲ್ಲವಾ?

**ಉ॥** ದೈವಜ್ಞಾನವನ್ನು ಬೋಧಿಸುವವರ್ಯಾರಾದರೂ ಸೂತ್ರದ ಪ್ರಕಾರ ಪ್ರವಕ್ತರೇ ಆಗುತ್ತಾರೆ. ಕೃಷ್ಣನನ್ನು ಸಹಾ ಪ್ರವಕ್ತ ಎನ್ನಬಹುದೆಂದು ಮೊದಲೆ ಹೇಳಿದ್ದೇವೆ.

ತಾತ್ಕಾಲಿಕವಾಗಿ ಆತನನ್ನು ಪ್ರವಕ್ತ ಎಂದರೂ ಆತನು ಶಾಶ್ವತವಾಗಿ ಪ್ರವಕ್ತನಲ್ಲ. ಮನುಷ್ಯರಿಗೆ ಜ್ಞಾನ ತಿಳಿಸುವ ಮೂರು ವಿಧಾನಗಳಲ್ಲಿ ದೇವರಿಂದ ಕಳಿಸಲಾದ ದೂತನಾಗಿ ಬಂದವನು ಶ್ರೀಕೃಷ್ಣನು. ಕೃಷ್ಣನು ಬಂದ ದೂತನೇ ಆದರೂ, ಕೃಷ್ಣನು ಕಳುಹಿಸಲ್ಪಟ್ಟವನೇ ಆದರೂ, ಸತ್ಯಾನ್ವೇಷಣೆ ಮಾಡಿ ನೋಡಿದರೆ, ವಾಸ್ತವವಾಗಿ ಆತನು ಕಳುಹಿಸಲ್ಪಟ್ಟವನಲ್ಲ. ಹಾಗೆ ಆತನು ದೂತನೂ ಅಲ್ಲ. ಕೃಷ್ಣನು ಕಳುಹಿಸಲ್ಪಟ್ಟವನಾದರೂ, ದೂತನಾಗಿ ಬಂದವನಾದರೂ ಆತನು ಕಳಿಸಲ್ಪಡಲಿಲ್ಲ, ದೂತನಾಗಿ ಬರಲಿಲ್ಲ. ಅಕ್ಬರ್ ಚಕ್ರವರ್ತಿ ಸ್ವತಃ ಪುರಪೌರನಾಗಿ ವೇಷ ಧರಿಸಿ ದಾರಿಹೋಕನಂತೆ ಕೆಲವು ಊರುಗಳು ತಿರುಗಿ ಸ್ವತಃವಾಗಿ ತನ್ನ ಪಾಲನೆಯನ್ನು ಕುರಿತು ತಿಳಿದುಕೊಂಡಿದ್ದಾನೆ. ಅಕ್ಬರ್ ಚಕ್ರವರ್ತಿ ಪೌರನ ವೇಷವನ್ನು ಧರಿಸಿರುವುದು ನಿಜವೇ, ದಾರಿಹೋಕನಾಗಿ ತಿರುಗಿರುವುದು ನಿಜವೇ. ಆ ವಿಷಯ ವಾಸ್ತವವೇ ಆದಷ್ಟುಮಾತ್ರಕ್ಕೆ ಪುರಪೌರನ ವೇಷದಲ್ಲಿರುವವನನ್ನು, ದಾರಿಹೋಕ ಆದವನನ್ನು ಅಕ್ಬರ್ ಅಲ್ಲ ಎನ್ನುವುದಕ್ಕೆ ಅವಕಾಶವಿಲ್ಲ. ಪೌರನು, ದಾರಿಹೋಕ ತಾತ್ಕಾಲಿಕವೇ. ಅಕ್ಬರ್ ಶಾಶ್ವತ. ಅದೇ ವಿಧವಾಗಿ ಕೃಷ್ಣನು ದೂತನಾಗಿ ಬಂದರೂ, ಕಳುಹಿಸಲ್ಪಟ್ಟವನಾದರು ಸತ್ಯಕ್ಕೆ ಆತನು ದೂತನಲ್ಲ, ಕಳಿಹಿಸಲ್ಪಟ್ಟವನು ಅಲ್ಲ. ವಾಸ್ತವಕ್ಕೆ ಆತನು ಕಳಿಸಿದವನೆ ಆದರೂ ದೇವರೇ ಎಂದು ಹೇಳಬಹುದು. ಹೇಗಾದರೆ ಬಂದವನು ಪೌರನು, ದಾರಿಹೋಕ ಅಲ್ಲವೆಂದು, ಬಂದವನು ಸ್ವತಃವಾಗಿ ಅಕ್ಬರ್ ಚಕ್ರವರ್ತಿಯೇ ಎಂದು ಹೇಗೆ ಹೇಳುತ್ತಿದ್ದೇವೊ, ಹಾಗೆಯೇ ದೂತನಾಗಿ ಬಂದವನು, ದೂತನಾಗಿ ಕಳುಹಿಸಲ್ಪಟ್ಟವನು ಸ್ವತಃವಾಗಿ ದೇವರೇ ಎಂದು ಹೇಳುತ್ತಿದ್ದೇವೆ.

ಹಾಗೆ ಹೇಳುವುದಕ್ಕೆ ಆಧಾರವೇನೆಂದು, ನೀವು ಹೇಗೆ ಹೇಳುತ್ತಿದ್ದೀರೆಂದು ಯಾರಾದರೂ ಕೇಳಿದರೆ, ಅದಕ್ಕೆ ನಮ್ಮ ಉತ್ತರ ಹೀಗೆ ಇದೆ. ದೇವರು ಎಂದರೆ ಹುಡುಕಬೇಕಾದವನಾಗಲಿ ಸಿಗುವವನಲ್ಲ. ಅಂತಹ ದೇವರು ಎಲ್ಲಿದ್ದರೂ ಒಬ್ಬನೇ ಇರುತ್ತಾನೆ. ಹಾಗಲ್ಲದೆ ತಾನಿರುವ ಕಡೆ ತನಗೆ ಜೊತೆಯಾಗಿರುವು

ದಕ್ಕೆಂದೊ ತನಗೆ ಸೇವೆಮಾಡುವುದಕ್ಕೋಸ್ಕರವೆಂದೊ ಮತ್ತೊಬ್ಬನನ್ನು ಇಟ್ಟುಕೊಂಡಿದ್ದರೆ, ಆತನಿಗೆ ದೇವರು ಎಂಬ ಹೆಸರು ಅನ್ವಯಿಸುವುದಿಲ್ಲ. ಏಕೆಂದರೆ ಪಕ್ಕದವನಿಗೆ ತಿಳಿದವನಾಗುತ್ತಾನೆ. ಮತ್ತು ಪಕ್ಕದಲ್ಲಿರುವವನಿಂದ ತಾನು ಎಲ್ಲಿರುವುದು ಇತರರಿಗೆ ತಿಳಿದುಹೋಗುತ್ತದೆ. ಆಗ ಸುಲಭವಾಗಿ ದೇವರು ಯಾರಿಗಾದರೂ ದೊರಕುತ್ತಾನೆ. ಅವರೆಲ್ಲರೂ ತನ್ನನ್ನು ನೋಡುತ್ತಾರೆ. ಇಲ್ಲಿಯವರೆಗು ದೇವರು ಯಾರಿಗೂ ಕಾಣಿಸದೆ ರಹಸ್ಯವಾಗಿ ಇದ್ದಾನೆಂದರೆ, ಆತನು ಯಾರನ್ನು ನಂಬಿ ತನ್ನ ಸೇವಕನನ್ನಾಗಿ ಒಬ್ಬನನ್ನು ಸಹಾ ನಿಯಮಿಸಿ ಕೊಳ್ಳಲಿಲ್ಲ. ದೇವರನ್ನು ಎಷ್ಟು ಹೊಗಳಿದರೂ ಆತನು ಮಾತ್ರ ಎಲ್ಲಿಯೂ ಯಾರಿಗು ಮೋಸಹೋಗದಂತೆ ಇದ್ದಾನೆ. ಪ್ರಪಂಚದಲ್ಲಿ ಅತ್ಯಂತ ಸನ್ನಿಹಿತ ಭಕ್ತನ್ಯಾರಾದರೂ ಇದ್ದರೂ ಆ ಒಬ್ಬನನ್ನು ಸಹಾ ನಂಬಿ ತನ್ನ ಹತ್ತಿರ ಸೇರಿಸಿಕೊಳ್ಳಲಿಲ್ಲ. ದೇವರು ಮನುಷ್ಯರ ಬಗ್ಗೆ ಏಕಷ್ಟು ಜಾಗ್ರತೆಯಾಗಿದ್ದಾನೆಂದು ಯಾರಾದರೂ ಕೇಳಿದರು, ಅದಕ್ಕೆ ದೇವರಾದರೆ ಹೀಗೆ ಉತ್ತರ ಹೇಳುತ್ತಾನೆ. "ನೀವು ಮನುಷ್ಯರು, ನಾನು ದೇವರಾದ್ದರಿಂದ, ನೀವು ಕಾಣಿಸುವವರು, ನಾನು ಕಾಣಿಸದವನು ಆದ ಕಾರಣ, ನೀವು ಹುಟ್ಟಿದ್ದೀರಾ, ನಾನು ಹುಟ್ಟಲಿಲ್ಲ ಆದ್ದರಿಂದ, ನಿಮಗೆ ಅವಯವಗಳಿವೆ, ನನಗೆ ಇಲ್ಲವಾದ್ದರಿಂದ, ನಿಮಗೆ ಕರ್ಮಗಳಿವೆ ನನಗೆ ಕರ್ಮಗಳಿಲ್ಲ ಆದ ಕಾರಣ, ಎಂದು" ಅನೇಕ ಸಮಾಧಾನಗಳು ಬಿಡದಂತೆ ಹೇಳುತ್ತಾನೆ.

ಇದೆಲ್ಲವನ್ನು ಗಮನಿಸಿದರೆ ದೇವರ ಹತ್ತಿರ ಒಬ್ಬರು ಸಹ ಇಲ್ಲ. ಆತನು ಏಕಾಕಿಯಾಗಿ ಒಬ್ಬನೇ ಇದ್ದಾನೆ. ಆದ್ದರಿಂದ ನಾನು ನನ್ನ ದೂತನನ್ನು ಕಳುಹಿಸುತ್ತಿದ್ದೇನೆಂದು, ನನ್ನ ದೂತ ನನ್ನ ಜ್ಞಾನವನ್ನೇ ಹೇಳುತ್ತಾನೆಂದು ಆತನು ಹೇಳಿದರೂ, ಜ್ಞಾನ ತಿಳಿದವನು ಆತನ ಮಾತುಗಳಲ್ಲಿನ ಸತ್ಯವನ್ನು ತಿಳಿದು ಕೊಳ್ಳುತ್ತಾನೆ. ಆತನ ಹತ್ತಿರ ಯಾರೂ ಇಲ್ಲವಾದ್ದರಿಂದ, ಆತನೇ ಬಂದಿದ್ದಾನೆಂದು ತಿಳಿದುಕೊಳ್ಳುತ್ತಾನೆ. ತನ್ನನ್ನು ಯಾರೂ ಗುರುತಿಸದಂತಿರುವುದಕ್ಕೆ ದೇವರು ಹಾಗೆ ಹೇಳಿದ್ದಾನೆಂದು, ಜ್ಞಾನಿ ಆದವನು ತಿಳಿದುಕೊಳ್ಳುತ್ತಾನೆ. ಹಾಗೆ

ತಿಳಿದುಕೊಂಡವನು ದೇವರ ಜ್ಞಾನದಲ್ಲಿನ ರಹಸ್ಯಗಳನ್ನೆಲ್ಲಾ ತಿಳಿಯುತ್ತಾನೆ. ಅಲ್ಲಿಯವರೆಗು ಅರ್ಥವಾಗದಂತಿದ್ದು ತಪ್ಪು ದಾರಿ ಹಿಡಿಯುವುದಕ್ಕೆ ಅವಕಾಶವಿರುವ ಜ್ಞಾನ ಸಂಶಯಗಳೆಲ್ಲವೂ ಇಲ್ಲದಂತಾಗುತ್ತವೆ. ಹಾಗೆ ತಿಳಿದುಕೊಂಡವನು ಅನತಿಕಾಲದಲ್ಲಿಯೇ ದೇವರ ಜ್ಞಾನವನ್ನೂ, ರಹಸ್ಯವನ್ನು ತಿಳಿಯಲ್ಪಟ್ಟು, ದೇವರ ಹತ್ತಿರಕ್ಕೆ ಸೇರಿಹೋಗುತ್ತಾನೆ. ಅಂತಹವನನ್ನು ಮೋಕ್ಷ ಹೊಂದಿದ್ದಾನೆಂದು, ಪರಮಪದವನ್ನು ಸೇರಿದ್ದಾನೆಂದು ಹೇಳಬಹುದು.

**ಪ್ರಶ್ನೆ :–** ಇಲ್ಲಿಯವರೆಗು ನೀವು ಹೇಳಿರುವುದನ್ನು ನಂಬಿ, ಸತ್ಯವೇ ಹೇಳುತ್ತಿದ್ದಾರೆಂದು ಕೊಂಡಿದ್ದೆವು. ಆದರೆ ಈಗ ನಿಮ್ಮಮಾತಿನ ಮೇಲೆ ಸ್ವಲ್ಪ ಅನುಮಾನ ಬರುತ್ತಿದೆ. ಅದಕ್ಕೆ ಕಾರಣವೇನೆಂದರೆ. ಇಲ್ಲಿಯವರೆಗು ದೇವರ ಹತ್ತಿರ ಯಾರೂ ಇಲ್ಲ ಎಂದು ಹೇಳಿದ್ದೀರ. ಕನಿಷ್ಟ ಒಬ್ಬನಂದರೆ ಒಬ್ಬನು ಸಹ ಇಲ್ಲವೆಂದು ಹೇಳಿದ್ದೀರ. ದೇವರು ಮನುಷ್ಯರನ್ನು ನಂಬುವುದಿಲ್ಲವೆಂದು ತನ್ನ ಹತ್ತಿರಕ್ಕೆ ಸೇರಿಸಿಕೊಳ್ಳುವುದಿಲ್ಲವೆಂದು ಸಹ ಹೇಳಿದ್ದೀರ. ನಾವು ನೀವು ಹೇಳಿರುವವೆಲ್ಲಾ ಕೇಳುತ್ತಾ ಬಂದಿದ್ದೇವೆ. ಪ್ರಸ್ತುತ ಈಗ ನೀವು ಹೇಳಿದ ಮಾತಿನಿಂದ ನಮಗೆ ಸ್ವಲ್ಪ ಸಂಶಯ ಏರ್ಪಡುತ್ತಿದೆ. ದೇವರನ್ನು ಕುರಿತು ಸತ್ಯ ತಿಳಿದವನು ಮೋಕ್ಷ ಹೊಂದಿ ದೇವರಹತ್ತಿರ ಸೇರಿಹೋಗುತ್ತಾನೆಂದು ಈಗ ನೀವು ಹೇಳಿದ್ದೀರಾ. ಮುಕ್ತಿಹೊಂದಿದವನು ದೇವರ ಸನ್ನಿಧಾನಕ್ಕೆ ಸೇರಿ ಜನ್ಮಕ್ಕೆ ಹೋಗುವುದಿಲ್ಲವೆಂದು ಇತರರೂ ಸಹ ಹೇಳಿದಾಗ ಕೇಳಿದ್ದೇವೆ. ಒಟ್ಟಾರೆ ದೇವರು ಯಾರನ್ನು ತನ್ನ ಹತ್ತಿರ ಸೇರಿಸಿಕೊಳ್ಳದಿದ್ದರೂ, ಮನುಷ್ಯನೇ ಮೋಕ್ಷಹೊಂದಿ ಆತನ(ದೇವರ) ಹತ್ತಿರಕ್ಕೆ ಹೋಗುತ್ತಿದ್ದಾನಲ್ಲವೆ! ಇದಕ್ಕೇ ನನ್ನುತ್ತೀರಾ. ನಮ್ಮ ಮಾತಿಗೆ ನೀವು ಏನು ಸಮಾಧಾನ ಹೇಳುತ್ತಿರಾ?

**ಉ॥** ಸರಿಯಾದ ಸಮಯದಲ್ಲಿ ಸರಿಯಾದ ಪ್ರಶ್ನೆ ಕೇಳಿ ನನ್ನನ್ನು ಇಕ್ಕಟ್ಟಿನೊಳಗೆ ತಳ್ಳಬೇಕೆಂದು ನೋಡುತ್ತಿದ್ದಾರೆ. ಆದರೂ ಫರವಾಗಿಲ್ಲ. ಇಂತಹ ಪ್ರಶ್ನೆಗಳನ್ನೇ ನಾನು ಕೋರಿಕೊಳ್ಳುತ್ತಿದ್ದೇನೆ. ನೀವು ಕೇಳಿದ ಪ್ರಶ್ನೆಗೆ ಉತ್ತರ ಹೀಗಿದೆ.

ಸಂಪೂರ್ಣಜ್ಞಾನ ತಿಳಿದವನು ತನ್ನ ಕರ್ಮಗಳೆಲ್ಲ ಇಲ್ಲದಂತೆಹೋದಾಗ, ಆತನು ಮೋಕ್ಷ ಹೊಂದಿ ದೇವರ ಹತ್ತಿರಕ್ಕೆ ಸೇರುತ್ತಾನೆಂಬ ಮಾತು ಸತ್ಯವೇ. ಆದರೆ ದೇವರು ತನ್ನ ಹತ್ತಿರಕ್ಕೆ ಬಂದವನನ್ನು ನೋಡಿ, ಇವನು ಹೊರಗೆ ನನ್ನ ಪಕ್ಕದಲ್ಲಿಯೇ ಇದ್ದರೆ ಒಳ್ಳೆಯದಲ್ಲವೆಂದು ತಿಳಿದು, ಅಲ್ಲಿಗೆಹೋದವನಿಗಿರುವ ಮೂಗು, ಕಿವಿಗಳು ಕೋಯ್ದುಹಾಕಿ, ರೂಪ ಇಲ್ಲದಂತೆ ಮಾಡಿ, ಕಾಲು ಕೈಗಳು ಮುರಿದುಹಾಕಿ ಚಲನೆ ಇಲ್ಲದಂತೆಮಾಡಿ, ನಾನು ಜೀವಾತ್ಮನೆಂಬ ಜ್ಞಾಪಕವಿಲ್ಲದಂತೆ ತಲೆಮೇಲೆ ಹೊಡೆದು, ಕೊನೆಗೆ ತನ್ನಂತೆ ನಿರಾಕಾರನನ್ನು ಮಾಡಿ, ಹೆಸರು, ಕೆಲಸ ಏನೂ ಇಲ್ಲದಂತೆ ಮಾಡಿ ತನ್ನಂತೆ ರೂಪ, ನಾಮ, ಕ್ರಿಯಾರಹಿತನಾದ ನಂತರ ತನ್ನೊಳಗೆ ಸೇರಿಸಿಕೊಳ್ಳುತ್ತಾನೆ. ಆಗ ಮೋಕ್ಷ ಹೊಂದಿದವನು ಯಾರೂ ದೇವರಿಗಿಂತ ಹೊರಗೆ ಇಲ್ಲದಂತೆಹೋಗಿ, ದೇವರೊಳಗೆ ದೇವರಂತೆ ಇದ್ದು ಹೋಗುತ್ತಾರೆ. ಅವನೇ ತಾನು, ತಾನೇ ಅವನಾದ ನಂತರ ಎಲ್ಲಾ ಒಂದಾಗಿಯೇ ಇರುತ್ತದಾಗಲಿ, ತನಗಿಂತ ಬೇರೆಯವನು ಯಾರೂ ಇರುವುದಿಲ್ಲ. ಆ ವಿಧವಾಗಿ ಯಾರು ಸೇರಿದರೂ, ಎಷ್ಟುಜನ ಸೇರಿದರೂ, ಅವರೆಲ್ಲರು ದೇವರೊಳಗೆ ಐಕ್ಯವಾಗಿಹೋಗಿ, ಯಾವ ಕಾರಣಕ್ಕು ಬೇರೆಯಾಗದೆ ಬೆರೆತುಹೋಗಿದ್ದಾರೆ. ಎರಡು ಎಂದು ಹೇಳುವುದಕ್ಕೆ ಸಾಧ್ಯವಿಲ್ಲದೆ ಎಲ್ಲಾ ಒಂದಾಗಿ ಬದಲಾಗಿಹೋಗಿದ್ದಾರೆ. ಆದ್ದರಿಂದ ಅಲ್ಲಿ ಯಾರೂ ಇಲ್ಲ, ದೇವರ ದೂತನಾಗಿ ಯಾರೂ ಬರುವುದಿಲ್ಲ. ಹೆಸರುಬದಲಿಸಿಕೊಂಡು ದೂತನಾಗಿ ಬರುವವನು ದೇವರೇ. ಇದರಲ್ಲಿ ಯಾವ ಸಂಶಯವಿಲ್ಲ.

ದೇವರು ತನ್ನ ಮೂಲಗ್ರಂಥವಾದ ಖುರ್‌ಆನ್‌ನಲ್ಲಿ, ಏನಾದರೂ ಮುಖ್ಯವಾದ ಜ್ಞಾನವಾಕ್ಯ ಬಂದಾಗ, ಆ ವಾಕ್ಯದ ಕೊನೆಯಲ್ಲಿ ಯಾವುದೊ ಒಂದು ಗುರುತನ್ನು ಇಟ್ಟಿರುತ್ತಾನೆ. ಅದು ಖುರ್‌ಆನ್‌ನಲ್ಲಿ ಇರುವ ಪ್ರತ್ಯೇಕತೆ. 42ನೇ ಸುರಾ 51ನೇ ಆಯತ್‌ನಲ್ಲಿ ಸಹ ಕೊನೆಯಲ್ಲಿ ಒಂದು ಮಾತು ಹೇಳಿದ್ದಾನೆ. ಅಲ್ಲಿ ಆತನು ಹೇಳಿದ ಮೂರು ವಿಧಾನಗಳಲ್ಲಿ ಕೊನೆಯದರಲ್ಲಿ ತನ್ನ ದೂತನನ್ನು ಕಳಿಸಿ ದೇವರ ಆಜ್ಞೆಮೇರೆಗೆ ದೂತನಮೂಲಕ ಕೋರಿದ

ಜ್ಞಾನವನ್ನು ತಿಳಿಸುತ್ತಾನೆಂದು ಇದೆ. ಅಲ್ಲಿಗೆ ಆ ವಾಕ್ಯವನ್ನು ನಿಲ್ಲಿಸದೆ "ನಿಶ್ಚಯವಾಗಿ ಆತನು ಮಹೋನ್ನತನು, ವಿವೇಕವಂತನು" ಎಂದು ಹೇಳುವುದು ನಡೆದಿದೆ. ಅಲ್ಲಿ ಹೇಳಿದಮಾತನ್ನು ಜಿಬ್ರಯೇಲ್ ತೆರೆ ಹಿಂಬದಿಯಿಂದ ಕಾಣಿಸದೆ ಹೇಳುತ್ತಿರುವಾಗ, ಮುಹಮ್ಮದ್ ಪ್ರವಕ್ತರು ಕೇಳುವುದು ನಡೆದಿದೆ. ಆಗ ಜಿಬ್ರಯೇಲ್ ಯಾರನ್ನು ಉದ್ದೇಶಿಸಿ ನಿಶ್ಚಯವಾಗಿ ಆತನು ಮಹೋನ್ನತನು, ವಿವೇಕವಂತನೆಂದು ಅಂದಿದ್ದಾನೆಂದು ಪ್ರಶ್ನಿಸಿಕೊಂಡು ನೋಡಿದರೆ ಮುಸ್ಲಿಮ್ ಸಮಾಜವೆಲ್ಲಾ ದೂತನನ್ನು ಕಳಿಸಿ ತನ್ನ ಜ್ಞಾನವನ್ನು ತಿಳಿಸುವ ದೇವರನ್ನು ಕುರಿತೇ ಆ ಮಾತು ಜಿಬ್ರಯೇಲ್ ಅಂದಿದ್ದಾನೆಂದು ಹೇಳುತ್ತಿದ್ದಾರೆ. ಅಲ್ಲಿರುವ ಪರಿಸ್ಥಿತಿಯನ್ನನುಸರಿಸಿ ಎಲ್ಲರೂ ಹಾಗೆಯೇ ಅಂದುಕೊಳ್ಳುವುದಕ್ಕೆ ಅವಕಾಶವಿದ್ದರೂ, ಜಿಬ್ರಯೇಲ್ ಸೃಷ್ಟ್ಯಾದಿಯಿಂದ ದೇವರ ಸೇವೆಯಲ್ಲಿದ್ದು, ದೇವರ ಜ್ಞಾನವನ್ನು ಸಂಪೂರ್ಣವಾಗಿ ತಿಳಿದವನಾದ್ದರಿಂದ, ಜಿಬ್ರಯೇಲ್ ನಾವು ಅಂದುಕೊಂಡಂತೆ ಹೇಳಲಿಲ್ಲವೆಂದು, ಅಲ್ಲಿ ಹೇಳಿರುವುದು ಬಂದಿರುವ ದೂತನನ್ನು ಕುರಿತೆಂದು ತಿಳಿಯುತ್ತಿದೆ. ದೇವರ ಜ್ಞಾನ ತಿಳಿದವನು ದೇವರನ್ನು ಬಿಟ್ಟು, ದೇವರಿಂದ ಕಳಿಸಲ್ಪಟ್ಟ ದೂತನನ್ನು ಹೊಗಳುತ್ತಾನಾ ಎನ್ನುವ ಪ್ರಶ್ನೆ ಕೆಲವರಿಗೆ ಬರಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಇಲ್ಲಿ ಚೆನ್ನಾಗಿ ಗಮನಿಸಿದರೆ, ಕಾಣಿಸದಂತೆ ತೆರೆ ಹಿಂಬದಿಯಿಂದ ಹೇಳಿದ ಮಹಾಜ್ಞಾನಿ ಜಿಬ್ರಯೇಲ್, ತನ್ನಗಿರುವ ಜ್ಞಾನದ ಪ್ರಕಾರ ದೂತನಾಗಿ ಬಂದಿರುವ ವ್ಯಕ್ತಿಯನ್ನು "ನಿಶ್ಚಯವಾಗಿ ಆತನು ಮಹೋನ್ನತನು, ವಿವೇಕವಂತನು" ಎಂದು ಹೇಳಿದ್ದಾನೆ. ದೇವರನ್ನು ತಿಳುವಳಿಕೆಯುಳ್ಳವನೆಂದು (ವಿವೇಕವಂತನೆಂದು) ಮಹೋನ್ನತನೆಂದು ಹೇಳಬೇಕಾದ ಅಗತ್ಯವಿಲ್ಲ. ಏಕೆಂದರೆ! ಕಾಣಿಸುವ ದೂತನಾಗಿ ಬಂದಿರುವ ಮನುಷ್ಯನನ್ನು ಪಕ್ಕದವರಿಗೆ ಹೋಲಿಸಿ, ಅವರಿಗಿಂತ ಈತನು ತಿಳುವಳಿಕೆಯುಳ್ಳವನೆಂದು ತಿಳಿಸುವ ನಿಮಿತ್ತ, ದೂತನನ್ನು ಉದ್ದೇಶಿಸಿ ಹೇಳಿರಬಹುದು. ಹಾಗೆಯೇ ನೀಚ ಉನ್ನತವೆಂದು ಹೇಳಿದಾಗ, ನೀಚವಾದ ಮನುಷ್ಯರೊಂದಿಗೆ ಮನುಷ್ಯನಾಗಿರುವ ದೂತನನ್ನು ಹೋಲಿಸಿ ಹೇಳಿದಾಗ, ದೂತನನ್ನು ಮಹೋನ್ನತನು

ಎಂದು ಹೇಳಿರಬಹುದು. ಅಷ್ಟೇಯಾಗಲಿ ಕಾಣಿಸದ ದೇವರನ್ನು ಕಾಣಿಸುವ ಮನುಷ್ಯರೊಂದಿಗೆ ಹೋಲಿಸಿ ಹೇಳಬೇಕಾದ ಅವಶ್ಯಕತೆ ಇರುವುದಿಲ್ಲ. ಏಕೆಂದರೆ! ದೇವರಿಗೆ ಮನುಷ್ಯರಿಗಿರುವಂತೆ ತಲೆ ಇರುವುದಿಲ್ಲ, ಅದರಲ್ಲಿ ಬುದ್ಧಿಯು ಇರುವುದಿಲ್ಲ. ಅಂತಹದರಲ್ಲಿ ಆತನು ಎಲ್ಲರಿಗಿಂತ ವಿವೇಕವಂತನೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಅಷ್ಟೇ ಅಲ್ಲದೆ ದೇವರು ಎಷ್ಟರಮಟ್ಟಿನವನೊ ಯಾರಿಗೂ ತಿಳಿಯದು. ಅಂತಹದರಲ್ಲಿ ಮನುಷ್ಯರಜೊತೆ ಹೋಲಿಸಿ ಮಹೋನ್ನತನು ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಯಾವ ವಿಧವಾಗಿ ದೇವರನ್ನು ನೋಡದವರು, ಆತನನ್ನು ಇತರರಜೊತೆ ಹೋಲಿಸಿ ಹೇಳುವುದೆಂಬುದು ನಡೆಯುವುದಿಲ್ಲ. ಆದ್ದರಿಂದ ಜಿಬ್ರಯೇಲ್ ದೇವರನ್ನು ಕುರಿತು ಏನು ಹೇಳದೆ, ಅಲ್ಲಿರುವ ದೂತನನ್ನು ಕುರಿತು ಮಾತ್ರವೆ ಹೇಳಿದ್ದಾನೆಂದು ತಿಳಿಯುತ್ತಿದೆ. ದೂತನನ್ನು ಕುರಿತು ಮಹೋನ್ನತನು, ವಿವೇಕವಂತನೆಂದು ಹೇಳಿದ ಮಾತು ಸರಿಹೋಗುತ್ತದೆ. ಈ ವಿಧವಾಗಿ ಖುರಾಆನ್‌ನಲ್ಲಿನ ವಾಕ್ಯಗಳನ್ನು ಸರಿಯಾಗಿ ಅರ್ಥ ಮಾಡಿ ಕೊಂಡಾಗಲೇ ಅದರಲ್ಲಿನ ನಿಜವಾದ ಜ್ಞಾನ ಅರ್ಥವಾಗುತ್ತದೆ.

ಜಿಬ್ರಯೇಲ್ ಖಗೋಳದಲ್ಲಿ ಸೃಷ್ಟ್ಯಾದಿಯಿಂದ ದೇವರ ಪರಿಪಾಲನೆ ಯಲ್ಲಿರುವ ಒಂದು ಗ್ರಹ. ಗ್ರಹ ಎಂದರೆ ಏನೊ ಕಡಿಮೆಯಾಗಿ ಲೆಕ್ಕಿಸಿಕೊಳ್ಳ ಬಾರದು. ಜಿಬ್ರಯೇಲ್ ಗ್ರಹ ರೂಪದಲ್ಲಿರುವ ಸಂಪೂರ್ಣಜ್ಞಾನಿ ಎಂದು ತಿಳಿಯಬೇಕು. ದೇವರ ಪರಿಪಾಲನೆಯಲ್ಲಿರುವವನು ಜಿಬ್ರಯೇಲ್ ಆದ್ದರಿಂದ, ಆತನನ್ನು ದೇವರ ಸೇವಕನು ಎಂದು ಹೇಳಬಹುದು. ದೇವರ ಸೇವಕನು ದೇವರ ಕಡೆಯಿಂದ ಕೆಲಸಮಾಡುವವನು ಆದ್ದರಿಂದ, ಆತನನ್ನು (ಜಿಬ್ರಯೇಲ್) ದೇವರ ದೂತ ಎಂದು ಕೆಲವರಂದಿರಬಹುದು. ಆದರೆ ಆತನನ್ನು ದೇವರಿಂದ ಕಳುಹಿಸಿದ ದೂತ ಎಂದು ಹೇಳಿಕೊಳ್ಳಬಾರದು. ಜಿಬ್ರಯೇಲ್ ಅಂತಹದೂತ ಅಲ್ಲವೆಂದು, ಯಾವಾಗಾದರೂ ದೂತ ಬಂದರೆ ಆತನು ದೇವರ ಪ್ರತಿನಿಧಿಯಾಗಿ ಬಂದರು ಕಾಣಿಸುವ ಭಗವಂತನೆಂದು ತಿಳಿಯಬೇಕು. ಶರೀರ ಇರುವವನನ್ನು ದೇವರು ಎಂದು ಹೇಳಬಾರದು. ಆದ್ದರಿಂದ ಹಾಗೆ ಬಂದವರನ್ನು ದೂತ,

ಅವದೂತಯೆಂದು ಹೇಳಬಹುದು. ತಾಯಿ ಗರ್ಭದಿಂದ (ಭಗದಿಂದ) ಹುಟ್ಟಿ ಬಂದವನಾದ್ದರಿಂದ, ಆತನನ್ನು ಭಗವಂತನೆಂದು ಸಹ ಎನ್ನುತ್ತಿದ್ದೇವೆ. ದೇವರು ಸ್ವತಃವಾಗಿ ಭೂಮಿಮೇಲೆ ಅವತರಿಸಿದರೆ ದೂತ, ಅವದೂತ, ಭಗವಂತನು ಎಂದು ಅನ್ನುತ್ತೇವೆ. ಜಿಬ್ರ್ರಯೇಲ್ ದೇವರ ಜ್ಞಾನಿ ಮಾತ್ರವೆ ಆದರೆ ದೇವರು ಅಲ್ಲ. ಆದ್ದರಿಂದ ಕಾಣಿಸದ ಜಿಬ್ರ್ರಯೇಲ್‌ನನ್ನು ತೆರೆ ಹಿಂಬದಿಯಿಂದಿ ಹೇಳಿದವನಾಗಿ ಲೆಕ್ಕಿಸುತ್ತಿದ್ದೇವೆ. ಕಾಣಿಸಿ ಜ್ಞಾನ ಹೇಳಿದ ಕೃಷ್ಣನನ್ನು ದೂತನಾಗಿ ಹೇಳುತ್ತಿದ್ದೇವೆ.

ಕಾಣಿಸಿ ದೈವಜ್ಞಾನ ಹೇಳುವ ದೂತ ಮನುಷ್ಯನಾಗಿದ್ದಾನೆ. ಆತನಿಗೆ ತಲೆ ಇದೆ, ಅದರಲ್ಲಿ ಅಮಿತವಾದ ಬುದ್ಧಿಯಿದೆ. ಆದ್ದರಿಂದ ದೂತನಾಗಿ ಬಂದಿರುವ ದೇವರು ಸಾಮಾನ್ಯನು ಅಲ್ಲವೆಂದು ತಿಳಿದ ಜಿಬ್ರ್ರಯೇಲ್, ತನ್ನ ಬೋಧನೆಯಲ್ಲಿ ದೂತನನ್ನು ನಿಶ್ಚಯವಾಗಿ ಆತನು ಮಹೋನ್ನತನು, ವಿವೇಕವಂತನು ಎಂದು ಹೇಳಿದ್ದಾನೆ. ಪ್ರಪಂಚದಲ್ಲಿ ದೇವರು ಮೊದಲನೆಯವ ನಾದರೆ, ದೇವರ ಪ್ರತಿನಿಧಿಯಾದ ದೂತ ಎರಡನೆಯವನಾಗುತ್ತಾನೆ. ಕಾಣಿಸದವನು ದೇವರು, ಕಾಣಿಸುವ ದೇವರನ್ನು ದೂತ (ಅವದೂತ) ಎಂದು ಹೇಳಬಹುದು. ಭೂಮಿಮೇಲೆ ದೇವರಿಗಿಂತ ಮೀರಿದ ಮಹೋನ್ನತನು ಯಾರೂ ಇಲ್ಲ. ಆದ್ದರಿಂದ ಮಹೋನ್ನತನು ಎನ್ನುವ ಮಾತನ್ನು ದೇವರ ದೂತನನ್ನು ಕುರಿತು ಹೇಳುವುದು ನಡೆದಿದೆ. ಮಹೋನ್ನತನು, ವಿವೇಕವಂತನು ಎಂದು ನೇರವಾಗಿ ಕಾಣಿಸದ ದೇವರನ್ನು ಕುರಿತು ಹೇಳುವುದು ಧರ್ಮ ವಿರುದ್ಧವಾಗುತ್ತದೆ. ಅದೇ ಮಾತುಗಳನ್ನೇ ದೇವರ ದೂತ ವಿಷಯದಲ್ಲಿ ಹೇಳುವುದು ತಪ್ಪಲ್ಲ. ಖುರಾಆನ್ ಗ್ರಂಥದಲ್ಲಿ ದೇವರ ಬೋಧನೆ ಮೂರು ವಿಧಗಳು ಭೂಮಿಮೇಲೆ ಮನುಷ್ಯರಿಗೆ ತಿಳಿಯಲ್ಪಡುತ್ತದೆಂದು ಹೇಳಿದ ಪ್ರಕಾರ ಎರಡನೆ ವಿಧಾನವಾಗಿ ಕಾಣಿಸದೆ ತೆರೆ ಹಿಂಬದಿಂದ ಹೇಳಿದವನು ಜಿಬ್ರ್ರಯೇಲ್‌ಯೆಂದು, ಜಿಬ್ರ್ರಯೇಲ್ ದೂತ ಅಲ್ಲವೆಂದು, ದೂತ ಆದವನು ಮೂರನೆ ವಿಧವಾದ ಬೋಧಕನಾಗುತ್ತಾನೆಂದು ತಿಳಿಯಬೇಕು. ದೂತಯೇ ನಿಜ ದೈವವೆಂದು ತಿಳಿದ

ಜಿಬ್ರಯೇಲ್, ದೂತನನ್ನು ಕುರಿತು ಮಹೋನ್ನತನು, ವಿವೇಕವಂತನೆಂದು ಅಂದಿದ್ದಾನೆ.

**ಪ್ರಶ್ನೆ :–** ಖುರಾನ್ ಜ್ಞಾನವನ್ನು ಮುಹಮ್ಮದ್ ಪ್ರವಕ್ತರಿಗೆ ಮೊದಲು ಹೇಳಿದ ಜಿಬ್ರಯೇಲ್ ಕಾಣಿಸದವನಾದರೆ, ಆತನನ್ನು ಏನೆಂದು ಹೇಳಬೇಕು. ಮುಹಮ್ಮದ್ ರವರು ಪ್ರವಕ್ತ ಆದಾಗ, ಜಿಬ್ರಯೇಲ್ ಏನಾಗುತ್ತದೆ?

**ಉ॥** ಖುರಾನ್‌ನನ್ನು ಮುಹಮ್ಮದ್‌ಗೆ ಹೇಳಿದ ಜಿಬ್ರಯೇಲ್‌ನನ್ನಾಗಲಿ, ತಾನು ಕೇಳಿದ ಖುರಾನ್‌ನನ್ನು ಪ್ರಜೆಗಳಿಗೆ ಹೇಳಿದ ಮುಹಮ್ಮದ್‌ರನ್ನಾಗಲಿ, ಇಬ್ಬರನ್ನು ಸೂತ್ರದ ಪ್ರಕಾರ ಪ್ರವಕ್ತರೆಂದೇ ಹೇಳಬೇಕು. ಆದರೆ ಜಿಬ್ರಯೇಲ್‌ರವರು ಖಗೋಳದಲ್ಲಿರುವ ಗ್ರಹ, ಮುಹಮ್ಮದ್‌ರವರು ಭೂಮಿಮೇಲಿರುವ ಒಬ್ಬ ಮನುಷ್ಯ. ಜಿಬ್ರಯೇಲ್ ಸೃಷ್ಟ್ಯಾದಿಯಿಂದ ಇರುವವನು, ಸೃಷ್ಠಿ ಇರುವವರೆಗೂ ಇರುವವನು. ಮುಹಮ್ಮದ್ ಪ್ರವಕ್ತ ಬಾರದ ಮುನ್ನ, ಮುಹಮ್ಮದ್‌ಪ್ರವಕ್ತ ಹೋದ ನಂತರ ಸಹ ಜಿಬ್ರಯೇಲ್ ಇದ್ದಾನೆ. ಜಿಬ್ರಯೇಲ್ ದೇವರ ಪಾಲನೆಯಲ್ಲಿ ಒಬ್ಬನು. ದೇವರ ಜ್ಞಾನವನ್ನು ಸಂಪೂರ್ಣವಾಗಿ ತಿಳಿದ ಜ್ಞಾನಿ. ಮುಹಮ್ಮದ್ ಖುರ್‌ಆನ್ ಜ್ಞಾನವನ್ನು ಹೇಳುವುದರಿಂದ ಪ್ರವಕ್ತ ಆದರೂ, ಆತನು ಸಾಧಾರಣ ಮನುಷ್ಯನೇ. ನಮ್ಮಂತೆ ಜನನ ಮರಣಗಳು, ಕಷ್ಟಸುಖಗಳಿರುವ ಒಬ್ಬ ವ್ಯಕ್ತಿ ಮುಹಮ್ಮದ್‌ರವರು ಎಂದು ತಿಳಿಯಬೇಕು.

**ಪ್ರಶ್ನೆ :–** ಬಹಳಜನ ಮುಸ್ಲಿಮ್ ಸೋದರರಿಗೆ ಪ್ರವಕ್ತ ಚೆನ್ನಾಗಿ ತಿಳಿಯುತ್ತಾನಾಗಲಿ, ಜಿಬ್ರಯೇಲ್ ಯಾರೊ ತಿಳಿಯದು. ಪ್ರವಕ್ತನಿಗೆ ತಿಳಿದ ಖುರ್‌ಆನ್ ಮೇಲಿಂದ ಬಂದಿರುವ ದೈವಸಂದೇಶವೆಂದು ಹೇಳುತ್ತಿದ್ದಾರೆ. ಇದಕ್ಕೆ ನೀವೇನನ್ನುತ್ತೀರಾ?

**ಉ॥** ಮೇಲಿಂದ ಬಂದಿರುವ ದೈವ ಸಂದೇಶವನ್ನು ವಾಣಿ ಅಥವಾ ವಹೀ ಎನ್ನುತ್ತಾರೆ. ಮುಹಮ್ಮದ್ ಪ್ರವಕ್ತರಿಗೆ ಕೇಳಿಸಿದ ಖುರ್‌ಆನ್ ಸಂದೇಶ ಆಗ ಮೇಲಿಂದ ಬಂದಿರುವುದು ಅಲ್ಲ. ಕೆಳಗೆ ತನಗೆ ಎದುರಾಗಿ ಕಾಣಿಸದಂತಿರುವ

ಜಿಬ್ರಯೇಲ್ ಹೇಳಿರುವುದೆಂದು ಖುರ್‌ಆನ್ ಗ್ರಂಥದಲ್ಲಿಯೇ ತಿಳಿಯುತ್ತಿದೆ. ಮೇಲಿಂದ ಬಂದಿರುವ ಶಬ್ಧ ಅಥವಾ ವಾಣಿಯನ್ನು, ದೇವರು ಹೇಳಿದ ಮೊದಲನೆ ವಿಧ ಜ್ಞಾನ ಪ್ರಚಾರವೆಂದು ತಿಳಿಯಬಹುದು. ಆದರೆ ಖುರ್‌ಆನ್‌ನಲ್ಲಿ ದೇವರು 42ನೇ ಸುರಾ, 51ನೇ ಆಯತ್‌ನಲ್ಲಿ ತಿಳಿಸಿದ ಪ್ರಕಾರ ದೇವರ ಜ್ಞಾನ ತೆರೆ ಹಿಂಬದಿಯಿಂದ ಹೇಳಲ್ಪಡುತ್ತದೆ ಎನ್ನುವುದು ಎರಡನೆಯ ವಿಧದ ಜ್ಞಾನ ಪ್ರಚಾರವೆಂದು ತಿಳಿಯುತ್ತಿದೆ. ಆದ್ದರಿಂದ ಖುರ್‌ಆನ್ ಗ್ರಂಥ ದೇವರು ತಿಳಿಸಿದ ಎರಡನೆಯ ವಿಧದ ಜ್ಞಾನ ಪ್ರಚಾರವೆಂದು ತಿಳಿಯಬೇಕು.

**ಪ್ರಶ್ನೆ :–** ಖುರ್‌ಆನ್ ಗ್ರಂಥದಲ್ಲಿ ದೇವರ ಜ್ಞಾನ ಭೂಮಿಮೇಲೆ ಮನುಷ್ಯರಿಗೆ ಮೂರು ವಿಧಗಳಾಗಿ ಬೋಧಿಸಲ್ಪಡುತ್ತದೆಂದು ಇದೆಯಲ್ಲವೆ! ಅದರಲ್ಲಿ ಒಂದು ವಾಣಿ (ವಹೀ) ಮೂಲಕ ಹೇಳಲ್ಪಡುತ್ತದೆ ಎಂದೂ, ಎರಡು ತೆರೆ ಹಿಂಬದಿಯಿಂದ ಹೇಳಲಾಗುತ್ತದೆ ಎಂದೂ, ಮೂರು ಕಳುಹಿಸಲ್ಪಟ್ಟ ದೂತನ ಮೂಲಕ ಹೇಳಲ್ಪಡುತ್ತದೆ ಎಂದೂ ಮೂರು ವಿಧಗಳು ಇದೆ ಅಲ್ಲವೆ! ಈ ಮೂರು ವಿಧಾನಗಳಲ್ಲಿ ಯಾವ ವಿಧಾನ ಉತ್ತಮವಾದುದು?

**ಉ॥** ದೇವರ ಜ್ಞಾನ ಭೂಮಿಮೇಲೆ ಮನುಷ್ಯರಿಗೆ ಹೇಳಲ್ಪಡುವ ಯಾವ ವಿಧಾನವಾದರೂ ಉತ್ತಮವಾದುದೆ. ಜ್ಞಾನ ತಿಳಿಯುವುದೇ ದೊಡ್ಡದು. ಆದ್ದರಿಂದ ಎಲ್ಲಾ ವಿಧಾನಗಳು ದೊಡ್ಡವೇ ಎಂದು ಹೇಳಬಹುದು. ಮೂರು ವಿಧಾನಗಳಲ್ಲಿ ಇದು ದೊಡ್ಡದು, ಇದು ದೊಡ್ಡದಲ್ಲ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಚೆನ್ನಾಗಿ ಆಲೋಚಿಸಿದರೆ ಮೊದಲ ವಿಧಾನ ವಾಣಿ ಮೂಲಕ ಜ್ಞಾನವನ್ನು ತಿಳಿಸುವುದೆಂದು ಇದೆ. ವಾಣಿ ಎಂದರೆ ಶಬ್ದ ಎಂದು ಅರ್ಥ. ದೇವರ ಜ್ಞಾನ ಶಬ್ದ ಮೂಲಕ ಕೇಳಿಸುವುದೆಂದು ನಮಗೆ ತಿಳಿದಾಗ, ಆ ಶಬ್ದ ಎಲ್ಲಿಂದ ಬರುತ್ತಿದೆ ಎಂದು ಪ್ರಶ್ನಿಸಿದರೆ, ಶಬ್ದ ಗಾಳಿ ಮೂಲಕ ಬಂದರೂ, ಅದು ಆಕಾಶದಿಂದ ಹುಟ್ಟಿದೆ ಎಂದು ತಿಳಿಯುತ್ತಿದೆ. ದೇವರ ಸೃಷ್ಠಿಯಲ್ಲಿ ಭೂತಗಳು, ಗ್ರಹಗಳು, ಜೀವರಾಶಿಗಳು ಎಂದು ಮೂರು ಭಾಗಗಳು ಇವೆ. ಮಹಾ ಭೂತಗಳು ಕೇವಲ ಐದು ಮಾತ್ರವೆ

ಇವೆ. ದೇವರಿಂದ ಮಹಾಭೂತಗಳು ಮೊದಲು ಹುಟ್ಟಿವೆ. ಅವುಗಳ ನಂತರ ಗ್ರಹಗಳು, ಜೀವರಾಶಿಗಳು ಹುಟ್ಟಿವೆ. ಮೊದಲು ಹುಟ್ಟಿದ ಮಹಾಭೂತಗಳು ಒಟ್ಟು ಐದು ಇವೆ. ಅವು ಕ್ರಮವಾಗಿ 1) ಆಕಾಶ 2) ಗಾಳಿ 3) ಅಗ್ನಿ 4) ನೀರು 5) ಭೂಮಿ. ಈ ಐದು ಭಾಗಗಳನ್ನೇ ಪ್ರಕೃತಿಯೆಂದು ಸಹಾ ಅನ್ನುತ್ತಿದ್ದೇವೆ, ಹಾಗೆ ಪಂಚಭೂತಗಳು ಅನ್ನುತ್ತಿದ್ದೇವೆ. ದೇವರ ಜ್ಞಾನ ಗಾಳಿ ಮೂಲಕ ಶಬ್ದರೂಪದಲ್ಲಿ ಬಂದಾಗ, ಆ ಶಬ್ದದಲ್ಲಿನ ಜ್ಞಾನ ಹುಟ್ಟಿರುವುದು ಆಕಾಶದಲ್ಲಿ ಎಂದು ತಿಳಿಯಬೇಕು. ಆಕಾಶ ಶೂನ್ಯವಾದುದು, ಶೂನ್ಯದಿಂದ ಹುಟ್ಟಿರುವ ಜ್ಞಾನ ಗಾಳಿ ಮೂಲಕ ಶಬ್ದವಾಗಿ, ಮೊದಲು ಸೂರ್ಯ ಗ್ರಹಕ್ಕೆ ಕೇಳಿಸಿದೆ. ಪ್ರಪಂಚದಲ್ಲಿ ಮೊಟ್ಟಮೊದಲು ದೈವಜ್ಞಾನ ಸೂರ್ಯನಿಗೆ ತಿಳಿದಾಗ, ಅದೇ ಜ್ಞಾನ ತಿಳಿದ ಎರಡನೆಯ ಗ್ರಹ ಜಿಬ್ರಯೇಲ್. ದೈವಜ್ಞಾನ ತಿಳಿದ ಮೊದಲನೆಯವನು ಸೂರ್ಯನು, ಎರಡನೆಯವನು ಜಿಬ್ರಯೇಲ್ ಎಂದು ಹೇಳಬಹುದು. ಆದರೆ ಸೂರ್ಯನು ಮೊದಲು ಭೂಮಿಮೇಲೆ ಮನು ಎಂಬ ವ್ಯಕ್ತಿಗೆ ತಿಳಿಸಿದ್ದಾನೆ. ಮನುವಿನ ಮೂಲಕ ಇತರ ಮನುಷ್ಯರಿಗೆ ತಿಳಿಯಲ್ಪಟ್ಟಿದೆ. ಇದನ್ನೆಲ್ಲವನ್ನು ಗಮನಿಸಿದರೆ ಭೂತಗಳು, ಗ್ರಹಗಳು, ಮನುಷ್ಯರು ಎನ್ನುವ ಮೂರು ಜಾತಿಗಳಲ್ಲಿ ಮೊದಲು ಭೂತಗಳಿಗೆ ತಿಳಿದ ಜ್ಞಾನ ನಂತರ ಗ್ರಹಗಳಿಗೆ ತಿಳಿದಾಗ, ಗ್ರಹಗಳ ಮೂಲಕ ಭೂಮಿಮೇಲೆ ಮನುಷ್ಯರಿಗೆ ತಿಳಿದಿದೆ.

ಪ್ರಕೃತಿಯಲ್ಲಿ ಭಾಗವಾದ ಆಕಾಶದಿಂದ ಪ್ರಾರಂಭವಾದ ಜ್ಞಾನ, ಕೊನೆಗೆ ಮನುಷ್ಯರಿಗೆ ಸೇರುವುದು ಎಲ್ಲವೂ ಒಂದು ಹಾದಿಯಂತೆ ತಿಳಿಯುತ್ತದೆ. ಒಂದು ಹಾದಿಯಾಗಿ (ಒಂದು ಮಾರ್ಗವಾಗಿ) ಕಾಣಿಸುವ ಈ ವಿಧಾನವನ್ನು ಎರಡು ಭಾಗಗಳಾಗಿ ವಿಭಜಿಸಿಕೊಳ್ಳಬಹುದು. ಅದು ಹೇಗೆಂದರೆ! ದೇವರಿಂದ ಮನುಷ್ಯರಿಗೆ ಜ್ಞಾನ ತಿಳಿಯುವ ಮೂರು ವಿಧಾನಗಳಲ್ಲಿ, ವಾಣಿ ಮೂಲಕ ತಿಳಿಸುವುದು ಒಂದು ವಿಧಾನವೆಂದು ತಿಳಿಯುತ್ತದೆ. ತೆರೆ ಹಿಂಬದಿಯಿಂದ ತಿಳಿಸುವುದನ್ನು ಮತ್ತೊಂದು ವಿಧಾನವೆಂದು ಅರ್ಥವಾಗುತ್ತದೆ. ಒಂದು ವಿಧಾನದ ಮೂಲಕ ದೇವರು ಸೃಷ್ಠಿಸಿದ ಗ್ರಹಗಳ ಗುಂಪಿಗೆ ಜ್ಞಾನ ತಿಳಿದಾಗ, ಎರಡನೆಯ ವಿಧಾನದ

ಮೂಲಕ ಗ್ರಹಗಳಿಂದ ಭೂಮಿಮೇಲೆ ಮನುಷ್ಯರಿಗೆ ತಿಳಿಸಲಾಗಿದೆ. ಆಕಾಶದಿಂದ ಸೂರ್ಯಗ್ರಹಕ್ಕೆ ತಿಳಿಯುವುದು ಒಂದು ವಿಧಾನವಾದರೆ, ಸೂರ್ಯ ಗ್ರಹದಿಂದ ಮನುಷ್ಯರಿಗೆ ತಿಳಿಯುವುದು ಎರಡನೆ ವಿಧಾನವಾಗಿದೆ. ಆಕಾಶದಲ್ಲಿರುವ ಗ್ರಹಗಳು ತಮ್ಮ ಸ್ಥೂಲವನ್ನು ಬಿಟ್ಟು, ಸೂಕ್ಷ್ಮವಾಗಿ ಭೂಮಿಮೇಲಕ್ಕೆ ಬಂದಾಗ, ಅವು ಯಾರ ಕಣ್ಣಿಗೆ ಕಾಣಿಸುವುದಿಲ್ಲ. ಆ ವಿಧವಾಗಿ ಕಾಣಿಸದೆ, ಮನುಷ್ಯರಿಗೆ ತಿಳಿದ ಭಾಷೆಯಲ್ಲಿ ಹೇಳುವುದನ್ನು ತೆರೆ ಹಿಂಬದಿಯಿಂದ ಹೇಳುವುದೆಂದಿದ್ದಾರೆ. ತೆರೆ ಹಿಂಬದಿಯಿಂದ ಎಂದರೆ! ಹೇಳುವವನು ಅಲ್ಲಿ ಎದುರುಗಿದ್ದರೂ ಕಾಣಿಸುವುದಿಲ್ಲವೆಂದು ಅರ್ಥ. ಹಾಗೆ ಕಾಣಿಸದಂತೆ ಮನುಷ್ಯರಿಗೆ ಸೂರ್ಯನು ಹೇಳಿದ್ದಾನೆ. ಹಾಗೆಯೇ ಜಿಬ್ರಯೇಲ್ ಸಹ ಹೇಳಿದ್ದಾನೆ. ಸೂರ್ಯನು ಹೇಳಿರುವುದು ಭಗವದ್ಗೀತೆಯಾಗಿದೆ. ಜಿಬ್ರಯೇಲ್ ಹೇಳಿರುವುದು ಖುರ್‌ಆನ್ ಆಗಿದೆ. ಇತ್ತ ಸೂರ್ಯನು ಹೇಳಿದ ಜ್ಞಾನವನ್ನೇ ಜಿಬ್ರಯೇಲ್ ಸಹ ಹೇಳಿದ್ದಾನೆ. ಸೂರ್ಯನಿಗೆ ತಿಳಿದ ಜ್ಞಾನವೇ ಜಿಬ್ರಯೇಲ್‌ಗು ಸಹ ತಿಳಿದಿದೆ. ಆದ ಕಾರಣ ಇತ್ತ ಸೂರ್ಯನು ಹೇಳಿರುವುದು, ಅತ್ತ ಜಿಬ್ರಯೇಲ್ ಹೇಳಿರುವುದು ಎರಡೂ ಒಂದೇ ಜ್ಞಾನವೇ ಎಂದು ಹೇಳಬಹುದು.

ಮುಖ್ಯವಾಗಿ ತಿಳಿಯಬೇಕಾಗಿರುವುದು ಏನೆಂದರೆ! ಸೂರ್ಯನು ಮನುವಿಗೆ ಹೇಳಿದ ದಿನದಂದು ಹೇಳಲಾದ ಜ್ಞಾನಕ್ಕೆ ಭಗವದ್ಗೀತೆಯೆಂದು ಹೆಸರು ಇಲ್ಲ. ಹಾಗದು ದೇವರ ಜ್ಞಾನವೆಂದು ಮಾತ್ರವೇ ಹೇಳಲಾಗಿದೆ. ಹಾಗೆಯೇ ಜಿಬ್ರಯೇಲ್ ಮೊದಲು ಮುಹಮ್ಮದ್‌ಗೆ ಹೇಳಿದಾಗ ದೈವಜ್ಞಾನಕ್ಕೆ ಖುರ್‌ಆನ್ ಎಂದು ಹೆಸರಿಲ್ಲ. ಆ ದಿನ ಜಿಬ್ರಯೇಲ್ ತಾನು ಹೇಳಿದ ಜ್ಞಾನವನ್ನು ದೇವರ ಜ್ಞಾನವಾಗಿಯೇ ಹೇಳಿದ್ದಾನೆ. ಮನುಷ್ಯರಿಗೆ ತಿಳಿದ ಜ್ಞಾನವನ್ನು ಗ್ರಂಥರೂಪವಾಗಿ ಬರೆದುಕೊಂಡಾಗ ಸೂರ್ಯನು ಹೇಳಿದ ಜ್ಞಾನಕ್ಕೆ ಭಗವದ್ಗೀತೆಯೆಂದು, ಜಿಬ್ರಯೇಲ್ ಹೇಳಿದ ಜ್ಞಾನಕ್ಕೆ ಖುರಾನ್ ಎಂದು ಹೆಸರು ಇಡಲಾಗಿದೆ. ಭಗವದ್ಗೀತೆ, ಖುರಾನ್ ಎನ್ನುವ ಗ್ರಂಥಗಳು ಎರಡೂ ಈ ದಿನ

ನಮ್ಮ ಮುಂದಿದ್ದರೂ, ಎರಡರಲ್ಲಿಯೂ ಒಂದೇ ಜ್ಞಾನವಿದೆಯೆಂದು ಗುರುತಿಸಲಾರದೆಹೋಗುತ್ತಿದ್ದೇವೆ. ಅದಕ್ಕೆ ಕಾರಣ ಈ ದಿನ ಮಾನವರಲ್ಲಿರುವ ಸಂಕುಚಿತ ಭಾವಗಳೆಂದೇ ತಿಳಿಯುತ್ತದೆ.

ಇಲ್ಲಿಯವರೆಗು ನಾವು ಹೇಳಿಕೊಂಡಿರುವವು ಎರಡು ವಿಧಾನಗಳೆ ಇವೆ. ದೇವರ ಜ್ಞಾನ ಭೂಮಿಮೇಲೆ ಮನುಷ್ಯರಿಗೆ ತಿಳಿಯುವ ಎರಡು ವಿಧಾನಗಳಲ್ಲಿ ಮಹಾಭೂತಗಳಾದ ಪ್ರಕೃತಿಪಾತ್ರ ಸ್ವಲ್ಪ, ಗ್ರಹಗಳ ಪಾತ್ರ ಸ್ವಲ್ಪ ಇರುವಂತೆ ಅರ್ಥವಾಗಿದೆ. ಈ ಎರಡು ವಿಧಾನಗಳು ಅಲ್ಲದೆ ಮೂಲ ಗ್ರಂಥಗಳಲ್ಲಿ ಮತ್ತೊಂದು ವಿಧಾನ ಸಹ ಇರುವಂತೆ ಹೇಳಿದ್ದಾರಲ್ಲವೆ! ಅದೇ ದೂತನನ್ನು ಕಳಿಸುವುದರ ಮೂಲಕ ತನ್ನ ಜ್ಞಾನವನ್ನು ತಿಳಿಸುವುದೆಂದು ಸಹ ಹೇಳಿದ್ದಾರೆ. ಈಗ ದೂತ ವಿಷಯ ಮುಖ್ಯವಾಗಿ ನಾವು ತಿಳಿಯಬೇಕಾಗಿದೆ. ದೂತ ಭೂತಗಳ ಮೂಲಕ (ಪ್ರಕೃತಿ ಮೂಲಕ) ಬರಲಿಲ್ಲ. ಹಾಗೆ ಗ್ರಹಗಳ ಮೂಲಕ ಬರಲಿಲ್ಲ. ದೂತ ಪ್ರಕೃತಿಯಲ್ಲಿ ಭೂತವಲ್ಲ, ಗ್ರಹಗಳಲ್ಲಿ ಗ್ರಹವೂ ಅಲ್ಲ. ಹಾಗೆಂದು ಜೀವಿಗಳಲ್ಲಿ ಜೀವಿಯೂ ಅಲ್ಲ. ವಿವರವಾಗಿ ಹೇಳಿಕೊಂಡರೆ ದೇವರ ಸೃಷ್ಠಿಯನ್ನು ಮುಖ್ಯವಾಗಿ ಮೂರು ಭಾಗಗಳಾಗಿ ಹೇಳಬಹುದು. ಅವುಗಳೇ ಒಂದು ಭೂತಗಳು, ಎರಡು ಗ್ರಹಗಳು, ಮೂರು ಜೀವಿಗಳು. ಇವುಗಳನ್ನು ವಿಭಜಿಸಿಕೊಂಡರೆ ಭೂತಗಳು ಎರಡು ವಿಧಗಳು, ಗ್ರಹಗಳು ಎರಡು ವಿಧಗಳು, ಜೀವಿಗಳೆಲ್ಲ ಒಂದೇ ವಿಧ. ಒಟ್ಟು ಐದು ವಿಭಜನೆಗಳಾಗಿರುವ ಸೃಷ್ಠಿಯನ್ನು ಮುಖ್ಯವಾಗಿ ಭೂತಗಳು, ಗ್ರಹಗಳು, ಜೀವಿಗಳೆಂದು ಮೂರು ವಿಧಗಳಾಗಿ ಹೇಳಬಹುದು. ಆದರೆ ದೇವರ ಜ್ಞಾನ ಮನುಷ್ಯರಿಗೆ ತಿಳಿಯದು. ಮೊದಲು ಹೇಳಿಕೊಂಡ ಎರಡು ವಿಧಾನಗಳಲ್ಲಿ ಭೂತಗಳ ಮೂಲಕ ಗ್ರಹಗಳಿಗೆ ಒಂದು ವಿಧಾನವಾದರೆ, ಗ್ರಹಗಳ ಮೂಲಕ ಜೀವಿಗಳಿಗೆ ಎರಡನೆ ವಿಧಾನವಾಗಿದೆ. ಈಗ ಹೇಳಿಕೊಳ್ಳುವ ಮೂರನೆ ವಿಧಾನದಲ್ಲಿ ಒಬ್ಬ ದೂತನ ಪಾತ್ರ ಹೊರತು ಭೂತಗಳ ಪಾತ್ರವಾಗಲಿ, ಗ್ರಹಗಳ ಪಾತ್ರವಾಗಲಿ ಸ್ವಲ್ಪವೂ ಇಲ್ಲ.

ದೂತನ ಮೂಲಕ ಜೀವಿಗಳಿಗೆ ದೇವರ ಜ್ಞಾನ ಭೂಮಿಮೇಲೆ ಈಗಾಗಲೇ ತಿಳಿಯಲ್ಪಟ್ಟಿದೆ. ಆದ್ದರಿಂದ ಆ ವಿಧಾನವನ್ನು ವಿಶ್ಲೇಷಿಸಿ ನೋಡಿದರೆ, ನಮಗೆ ಸ್ವಲ್ಪ ಹೊಸ ವಿಧಾನ ಅರ್ಥವಾಗುತ್ತದೆ. ಅದೇನೆಂದರೆ! ಮೂಲ ಗ್ರಂಥಗಳಲ್ಲಿ ತನ್ನ ದೂತನ ಮೂಲಕ ಜ್ಞಾನ ಹೇಳಲಾಗುತ್ತದೆ ಎಂದು ಇದ್ದರೂ, ಆ ದೂತ ಯಾರು ಎನ್ನುವುದು ಮುಖ್ಯವಾದ ಪ್ರಶ್ನೆಯಾಗಿದೆ. ದೂತ ಭೂತವಲ್ಲ, ಗ್ರಹವೂ ಅಲ್ಲ. ಆದ್ದರಿಂದ ನಮ್ಮೊಂದಿಗೆ ಪ್ರತ್ಯಕ್ಷವಾಗಿ ಮಾತನಾಡಿದ ನಮ್ಮಂತಹ ವ್ಯಕ್ತಿಯೇ ಆಗಿರುವುದು ವಿಶೇಷ. ಆದರೆ ದೂತನನ್ನು ಗುರುತಿಸುವುದಕ್ಕೆ ಯಾರಿಗೂ ಸಾಧ್ಯವಾಗುವುದಿಲ್ಲ. ದೂತ ಸಾಧಾರಣ ಮನುಷ್ಯನಾಗಿರುವುದೇ ಅದಕ್ಕೆ ಮುಖ್ಯ ಕಾರಣ. ದೂತ ಎನ್ನುವ ವ್ಯಕ್ತಿ ಸಾಧಾರಣ ವ್ಯಕ್ತಿಯಾ ಅಲ್ಲವಾ ಎನ್ನುವ ವಿಷಯವನ್ನು ಕುರಿತು ನಾವು ಮೊದಲೆ ಚರ್ಚಿಸಿಕೊಂಡಿದ್ದೇವೆ. ದೂತ ಎನ್ನುವವನು ಯಾರೋ ಅಲ್ಲ, ರೂಪ ಬದಲಿಸಿಕೊಂಡು ಬಂದಿರುವ ದೇವರೇ ಎಂದು ತಿಳಿದುಹೋಗಿದೆ. ಕೆಲವರು ಪ್ರತ್ಯೇಕಿಸಿ ಕೆಲವು ಮತಗಳಲ್ಲಿ ದೇವರು ಜನ್ಮಿಸುವುದಿಲ್ಲ ಎಂದು ಅನ್ನುತ್ತಿದ್ದಾರೆ. ನಾವು ಸಹ ದೇವರು ಜನ್ಮಿಸುವುದಿಲ್ಲವೆಂದೇ ಹೇಳುತ್ತಿದ್ದೇವೆ. ಆದರೆ ದೇವರು ದೇವರಾಗಿ ಜನ್ಮಿಸಲಿಲ್ಲ. ವೇಷ ಬದಲಿಸಿಕೊಂಡು ಮಾರು ರೂಪದಲ್ಲಿ, ಮಾರು ಹೆಸರಿನಿಂದ ಜನ್ಮಿಸುತ್ತಿದ್ದಾನೆಂದು ಅನ್ನುತ್ತಿದ್ದೇವೆ. ಹಾಗೆ ಹೆಸರು ಬದಲಿಸಿಕೊಂಡು, ರೂಪ ಬದಲಿಸಿಕೊಂಡು ಹುಟ್ಟಿದ್ದಾನೆಂಬು ವುದಕ್ಕೆ ಕೆಲವು ಆಧಾರಗಳು ಇವೆ. ಅವು ಯಾವೆಂದರೆ! ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ 11ನೇ ಶ್ಲೋಕದಲ್ಲಿ ಭಗವಂತನು ಹೀಗೆ ಹೇಳಿದ್ದಾನೆ.

**ಶ್ಲೋ॥ ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್।**
**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್॥**

**ಭಾವ :–** "ಸರ್ವ ಜೀವರಾಶಿಗಳಿಗು ದೇವರಾದ ನಾನು ಮಾನವ ಶರೀರ ಧರಿಸಿ ಭೂಮಿಮೇಲಕ್ಕೆ ಬಂದಾಗ, ಮಾನವಾಕಾರದಲ್ಲಿರುವ ನನ್ನನ್ನು ನೋಡಿದ

ಮನುಷ್ಯರು ನನ್ನ ಶ್ರೇಷ್ಠತ್ವವನ್ನು ತಿಳಿಯದೆ, ನಾನು ಎಲ್ಲರಿಗೂ ಅಧಿಪತಿಯೆಂದು ತಿಳಿಯದೆ ಮೂಢರಾಗಿ ನನ್ನನ್ನು ಅವಮಾನಿಸುತ್ತಿದ್ದಾರೆ"

ಭಗವದ್ಗೀತೆ ಜ್ಞಾನಯೋಗದಲ್ಲಿ ॥ 6ನೇ ಶ್ಲೋಕ...

**ಶ್ಲೋ॥ ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮ ಮಾಯಯಾ॥**

**ಭಾವ :–** "ದೇವರಾಗಿರುವ ನನಗೆ ನಾಶವಿಲ್ಲ, ಹಾಗೆ ದೇವರಾಗಿ ನಾನು ಹುಟ್ಟುವುದಿಲ್ಲ. ಸಕಲ ಜೀವರಾಶಿಗಳಿಗೆ ನಿಯಾಮಕನು ಆದ ನಾನು, ಮಾಯೆಯೊಂದಿಗೆ ಬೆರೆತು ಯಾರೂ ಗುರುತಿಸದ ಭಗವಂತನಾಗಿ, ಸಾಧಾರಣ ಮನುಷ್ಯ ಶರೀರವನ್ನು ಧರಿಸಿ ಹುಟ್ಟುತ್ತಿದ್ದೇನೆ."

ಈ ವಿಧವಾಗಿ ಭಗವದ್ಗೀತೆಯಲ್ಲಿ ದೇವರು ಭಗವಂತನಾಗಿ ಇರುವಾಗ ಹೇಳಿರುವುದು, ಪವಿತ್ರ ಖುರಾನ್ ಗ್ರಂಥದಲ್ಲಿ 89ನೇ ಸುರಾದಲ್ಲಿ 22ನೇ ಆಯತ್‌ನಲ್ಲಿ "ದೇವದೂತರು ಬಹಳ ಹೆಚ್ಚಾದಾಗ ನಿನ್ನ ಪ್ರಭುವು (ದೇವರು) ಅವತರಿಸುತ್ತಾನೆ (ಬರುತ್ತಾನೆ)" ಎಂದು ಜಿಬ್ರಯೇಲ್ ಹೇಳಿದ್ದಾನೆ. ಈ ವಿಧವಾಗಿ ಭಗವದ್ಗೀತೆ, ಖುರಾನ್, ಬೈಬಲ್ ಗ್ರಂಥಗಳಲ್ಲಿ ದೇವರು ಭೂಮಿಮೇಲೆ ಬರುತ್ತಾನೆಂದು ಇದೆ. ಭಗವದ್ಗೀತೆಯಲ್ಲಿ ಸ್ಪಷ್ಟವಾಗಿ ದೇವರಾದ ನಾನು ಮನುಷ್ಯನಾಗಿ ಅವತರಿಸುತ್ತೇನೆಂದು ಹೇಳುವುದು ನಡೆದಿದೆ. ದೇವರು ದೇವರಾಗಿ ಎಂದಿಗೂ ಭೂಮಿಮೇಲಕ್ಕೆ ಬರುವುದಿಲ್ಲ, ಆದರೆ ದೇವರು ಮತ್ತೊಂದು ರೂಪದಿಂದ ದೂತ ಅಥವಾ ಭಗವಂತನು ಎನ್ನುವವನಾಗಿ ಬರುತ್ತಾನೆಂದು ಹೇಳಬಹುದು. ಆಗಲೂ ಸಹ ನಾನು ದೂತನೆಂದಾಗಲಿ, ಭಗವಂತನೆಂದಾಗಲಿ ಎಲ್ಲಿಯೂ ಯಾರ ಹತ್ತಿರವೂ ಹೇಳುವುದಿಲ್ಲ. ದೇವರು ಭೂಮಿಮೇಲೆ ಅವತರಿಸಿದ್ದಾನೆಂಬ ವಿಷಯ ಯಾರೂ ಕಂಡುಹಿಡಿಯಲಾರರು. ಆದ್ದರಿಂದ ದೇವರು ಮನುಷ್ಯನಾಗಿ ಭೂಮಿ ಮೇಲಕ್ಕೆ ಬಂದು ಸ್ವತಃವಾಗಿ ಜ್ಞಾನ ಹೇಳಿ

ಹೋದರೂ, ಆತನು ಬಂದಂತಾಗಲಿ, ಹೋದಂತಾಗಲಿ ಯಾರಿಗು ತಿಳಿಯದು. ಭಗವದ್ಗೀತೆಯಲ್ಲಿ ನಾನು ಎಷ್ಟೋಬಾರಿ ಬಂದಿದ್ದೇನೆಂದು ಜ್ಞಾನಯೋಗದಲ್ಲಿ ಐದನೆಯ ಶ್ಲೋಕದಲ್ಲಿ ಹೇಳಿದರೂ ಆ ವಿಷಯವನ್ನು ಯಾರೂ ಗ್ರಹಿಸಿಕೊಳ್ಳದೆ ದೇವರು ಮನುಷ್ಯನಾಗಿ ಬರುವುದಿಲ್ಲವೆಂದು, ಅವತರಿಸುವುದಿಲ್ಲವೆಂದು ಹೇಳುತ್ತಿದ್ದಾರೆ. ಅಂತಹವರಿಗೋಸ್ಕರ ಭಗವದ್ಗೀತೆ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ ಹನ್ನೊಂದನೆಯ ಶ್ಲೋಕವನ್ನೂ, ಜ್ಞಾನಯೋಗದಲ್ಲಿ ಆರನೆ ಶ್ಲೋಕವನ್ನು ಹೇಳುವುದು ನಡೆದಿದೆ. ಅಷ್ಟೇ ಅಲ್ಲದೆ ಆತನು (ದೇವರು) ಭೂಮಿಮೇಲಕ್ಕೆ ಯಾವ ಕೆಲಸ ನಿಮಿತ್ತವಾಗಿ ಬರುತ್ತಿದ್ದಾನೋ ಆ ಕೆಲಸವನ್ನು ವಿವರಿಸುತ್ತಾ ಜ್ಞಾನಯೋಗದಲ್ಲಿ 7,8 ಶ್ಲೋಕಗಳಲ್ಲಿ ಹೀಗೆ ಹೇಳುತ್ತಿದ್ದಾನೆ...

**7) ಶ್ಲೋ॥ ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ! ।**
**ಅಭ್ಯುತ್ಥಾನ ಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್॥**

**8) ಶ್ಲೋ॥ ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್।**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ॥**

**ಭಾವ :–** "ಯಾವ ಯಾವ ಕಾಲದಲ್ಲಿ ಧರ್ಮಕ್ಕೆ ಮುಪ್ಪು ಉಂಟಾಗಿ ಭೂಮಿಮೇಲೆ ಅಧರ್ಮ ಉದ್ರೇಕಗೊಳ್ಳುತ್ತದೊ, ಆಗ ನನ್ನನ್ನು ನಾನು ಮನುಷ್ಯನನ್ನಾಗಿ ನಿರ್ಮಿಸಿಕೊಂಡು ಭೂಮಿಮೇಲೆ ಹುಟ್ಟುತ್ತಿದ್ದೇನೆ."

"ಹಾಗೆ ಮಾನವನಾಗಿ ಹುಟ್ಟಿದ ನಾನು ಧರ್ಮಗಳನ್ನು ತಿಳಿಸಿ ಅಧರ್ಮವರರ ಸಂಖ್ಯೆಯನ್ನು ತಗ್ಗಿಸುತ್ತೇನೆ. ಈ ವಿಧವಾಗಿ ಧರ್ಮಗಳನ್ನು ತಿಳಿಸುವುದಕ್ಕೋಸ್ಕರ, ಯುಗ ಯುಗದಲ್ಲಿ ಎಂದರೆ ಯಾವ ಯುಗದಲ್ಲಿಯಾದರೂ ನಾನು ಭೂಮಿಮೇಲಕ್ಕೆ ಬರುತ್ತಿರುತ್ತೇನೆ."

ಈಗ ಈ ಮಾತಿನಿಂದ ಭೂಮಿಮೇಲೆ ನಾನು ನೇರವಾಗಿ ನಿಮಗೆ ಜ್ಞಾನವನ್ನು ಹೇಳುತ್ತೇನೆಂದು ಇದ್ದರೂ, ದೂತ ಮೂಲಕ ಜ್ಞಾನ ತಿಳಿಸುತ್ತೇನೆಂದು

ನೆಪ ಹೇಳಿದ್ದಾನೆ. ಮೊದಲೇ ಗೀತೆಯಲ್ಲಿ ನಾನು ಮನುಷ್ಯನಾಗಿ ಬಂದು ಧರ್ಮಗಳನ್ನು (ದೇವರ ಜ್ಞಾನವನ್ನು) ತಿಳಿಸುತ್ತೇನೆಂದು ಯಾವ ನೆಪ ಇಲ್ಲದೆ ನೇರವಾಗಿ ಹೇಳಿದ್ದಾನೆ. ಆದರೂ ನನ್ನ ದೂತನ ಮೂಲಕ ದೇವರ ಜ್ಞಾನವನ್ನು ತಿಳಿಸುತ್ತೇನೆಂದು ಗುಟ್ಟಾಗಿ 14 ನೂರು ವರ್ಷಗಳ ಕೆಳಗೆ ಹೇಳಿದಮಾತು ಯಾರಿಗೂ (ಮುಸ್ಲಿಮ್‌ರಿಗೆ) ಅರ್ಥವಾಗಲಿಲ್ಲ. ಹಾಗೆ ನಾನೇ ಬಂದು ಜ್ಞಾನವನ್ನು ಧರ್ಮವನ್ನು ತಿಳಿಸುತ್ತೇನೆಂದು ರಟ್ಟಾಗಿ ಐದುಸಾವಿರ ವರ್ಷಗಳ ಕೆಳಗೆ ಹೇಳಿದ ಮಾತು ಮನುಷ್ಯರಿಗೆ ಅರ್ಥವಾಗದೆ, ದೇವರು ಭೂಮಿಮೇಲಕ್ಕೆ ಬರುವುದಿಲ್ಲ. ದೇವರು ಆರು ಆಕಾಶಗಳ ಆಚೆ ಏಳನೆ ಆಕಾಶದಲ್ಲಿದ್ದಾನೆಂದು ಹೇಳುತ್ತಿದ್ದಾರೆ. ಇರುವುದು ಒಂದೇ ಆಕಾಶವೆಂದು ತಿಳಿಯದವರು ಸ್ಥೂಲವಾಗಿ ಏಳು ಆಕಾಶಗಳು ಇಲ್ಲವೆಂದು ತಿಳಿಯದೆ, ಏಳು ಆಕಾಶಗಳನ್ನುವ ಸೂಕ್ಷ್ಮ ಅರ್ಥವನ್ನು ಗ್ರಹಿಸಲಾರದೆ, ಸ್ಥೂಲವಾಗಿಯೇ ಮೇಲೆ ಏಳು ಆಕಾಶಗಳು ಇವೆಯೆಂದು ಅನ್ನುತ್ತಿದ್ದಾರೆ.

ದೇವರು ಭೂಮಿಮೇಲೆ ಮನುಷ್ಯರಿಗೆ ಜ್ಞಾನವನ್ನು ಮೂರು ವಿಧಗಳಲ್ಲಿ ತಿಳಿಸುತ್ತೇನೆಂದು, ಹೇಳಿದಮಾತಿನ ಪ್ರಕಾರ ಭೂತಗಳು, ಗ್ರಹಗಳಿಗೆ ವಾಣಿ ಮೂಲಕ ತಿಳಿಸುವುದು ಒಂದು ವಿಧವಾಗಿದ್ದು, ಗ್ರಹಗಳು ಮನುಷ್ಯರಿಗೆ ಕಾಣಿಸದೆ ತೆರೆ ಹಿಂಬದಿಯಿಂದ ತಿಳಿಸುವುದು ಎರಡನೆ ವಿಧವಾಗಿದೆ. ಈ ಎರಡು ವಿಧಗಳನ್ನು ಒಂದು ಗುಂಪಿಗೆ ಸೇರಿರುವವಾಗಿ, ದೇವರ ಪರಿಪಾಲನೆಯಿಂದ ನಡೆಯುವ ವಿಧಾನವಾಗಿ ಹೇಳಬಹುದು. ಮೊದಲ ಎರಡು ವಿಧಗಳು ಒಂದು ಗುಂಪಿಗೆ ಸೇರಿರುವವಾಗಿದ್ದು, ಮೂರನೆ ವಿಧಾನ ಮಾತ್ರ ಸ್ವತಃವಾಗಿ ದೇವರೇ ದೂತನಾಗಿ (ಭಗವಂತನಾಗಿ) ಬಂದು ಹೇಳುವುದು ಪ್ರತ್ಯೇಕತೆ ಹೊಂದಿದೆ. ತನ್ನ ಪರಿಪಾಲನೆಯಲ್ಲಿರುವ ಭೂತಗಳನ್ನೂ, ಗ್ರಹಗಳನ್ನೂ ದೇವರ ಸೇವಕರಾಗಿ, ದೇವರ ಕೆಲಸವನ್ನು ಮಾಡುವವರಾಗಿ ಲೆಕ್ಕಿಸಿ ಹೇಳಬಹುದು. ಅಂತಹ ದೇವರ ಸೇವಕರಾದ ಭೂತಗಳ, ಗ್ರಹಗಳ ಕಾರ್ಯದಿಂದ, ಭೂಮಿಮೇಲಕ್ಕೆ ಜ್ಞಾನ ಸೇರುತ್ತಿದೆ. ಎಲ್ಲಿಯೋ ದೂರಪ್ರಾಂತದಲ್ಲಿರುವ ಸಾಮಾಗ್ರಿಯನ್ನು ವಾಹನಗಳ

ಮೂಲಕ ಗಮ್ಯ (ಗುರಿ) ಸ್ಥಾನಕ್ಕೆ ಸೇರಿಸಿದಂತೆ, ಪ್ರಜೆಗಳಿಗೆ ದೂರವಾಗಿ ಎಲ್ಲೋ ಇರುವ ಜ್ಞಾನವನ್ನು ಭೂತಗಳು ಮತ್ತು ಗ್ರಹಗಳ ಮೂಲಕ ಮನುಷ್ಯರವರೆಗು ಸೇರಿಸುವುದು ಎರಡು ವಿಧಗಳಾಗಿರುವಾಗ, ಹಾಗೆ ರವಾನೆ ಮಾಡದಂತೆ ಮನುಷ್ಯರ ಹತ್ತಿರವೇ ಸಾಮಾಗ್ರಿಯನ್ನು ತಯಾರುಮಾಡಿ ಕೊಡುವುದು ಮತ್ತೊಂದು ಪ್ರತ್ಯೇಕ ವಿಧವಾಗಿದೆ. ಮನುಷ್ಯರ ಹತ್ತಿರಕ್ಕೆ ದೇವರು ಮನುಷ್ಯನಾಗಿ ಬಂದು, ಆಗ ಅಗತ್ಯವಾದ ಜ್ಞಾನವನ್ನು ಪ್ರತ್ಯಕ್ಷವಾಗಿ ತಿಳಿಸುವುದು ಪ್ರತ್ಯೇಕ ವಿಧವೆಂದು ತಿಳಿಯುತ್ತಿದೆ.

ಮನುಷ್ಯರ ಹತ್ತಿರಕ್ಕೆ ದೇವರ ಜ್ಞಾನ ಸೇರುವುದು ಕೊನೆಗೆ ಎರಡು ವಿಧಗಳೆಂದು ತಿಳಿಯುತ್ತಿದೆ. ಒಂದು ಕಾಣಿಸದ ಗ್ರಹಗಳ ಮೂಲಕ, ಎರಡು ಕಾಣಿಸುವ ಮನುಷ್ಯನಾಗಿರುವ ದೇವರ ಮೂಲಕ ಎಂದು ಹೇಳಬಹುದು. ಈ ಪ್ರಕ್ರಿಯೆ ಕೆಲವು ಸಾವಿರಾರೂ ವರ್ಷಗಳಿಗೋ ಅಥವಾ ಕೆಲವು ಲಕ್ಷಗಳ ವರ್ಷಗಳಿಗೊಮ್ಮೆ ನಡೆಯುತ್ತಿರುತ್ತದೆ. ಹೀಗೆ ಒಂದುಬಾರಿ ಭೂಮಿಮೇಲೆ ತಿಳಿಯಲಾದ ಜ್ಞಾನವನ್ನು ನಂತರ ಕಾಲದಲ್ಲಿ ಕೆಲವು ಸಾವಿರವರ್ಷಗಳವರೆಗು ಮನುಷ್ಯರಲ್ಲಿ ಕೆಲವರು ಬೋಧಕರಾಗಿ ಏರ್ಪಟ್ಟು ಉಳಿದ ಪ್ರಜೆಗಳಿಗೆ ಹೇಳುತ್ತಿರುತ್ತಾರೆ. ಬೋಧಕರು ಗುರುಗಳೆಂದುಕೊಂಡು ಹೇಳುತ್ತಾಹೋಗಿರುವ ಜ್ಞಾನ, ಸ್ವಲ್ಪ ಕಾಲಕ್ಕೆ ಪೂರ್ತಿಯಾಗಿ ದೇವರು ಹೇಳಿದ ಮಾತುಗಳಿಗೆ ಅರ್ಥವೂ, ಭಾವವೂ ಬದಲಾಗಿಹೋಗಿ ಧರ್ಮಗಳು ಅಧರ್ಮಗಳಾಗಿ ಬದಲಾಗಿಹೋಗುತ್ತಿವೆ. ಹಾಗೆ ಬದಲಾದ ಧರ್ಮಗಳನ್ನು ಸರಿಮಾಡುವುದಕ್ಕೆ ದೇವರು ಗ್ರಹಗಳ ಮೂಲಕವಾದರೂ ಹೇಳಬೇಕಾಗಿರುತ್ತದೆ, ಅಥವಾ ತಾನೇ ಸ್ವತಃವಾಗಿಯಾದರೂ ಬರಬೇಕಾಗಿರುತ್ತದೆ. ಹೇಗಾದರೂ ದೇವರು ಮನುಷ್ಯನಾಗಿ (ಭಗವಂತನಾಗಿ) ಬಂದಿರುವ ಸಮಯದಲ್ಲಿ, ಭೂಮಿಮೇಲಿದ್ದು ಆತನ ಮೂಲಕ ಸ್ವತಃವಾಗಿ ಜ್ಞಾನ ತಿಳಿದುಕೊಂಡವರು, ನಿಜವಾಗಿ ಅದೃಷ್ಟವಂತರೆಂದೇ ಹೇಳಬಹುದು. ಆದರೆ ಬಂದಿರುವವನು, ಹೇಳುವವನು ಯಾರಾಗಿರುವುದು ತಿಳಿಯದೆ ತಮ್ಮಂತಿರುವ ದೇವರನ್ನು ಸಹಾ, ಕೆಲವು ಸಮಯಗಳಲ್ಲಿ ಅವಹೇಳನ

ಮಾಡುವುದು ನಡೆಯುತ್ತಿದೆ. ಅಂತಹವರು ನಿಜವಾಗಲು ದುರದೃಷ್ಟವಂತರೆಂದು ಹೇಳಬಹುದು. ಭೂಮಿಮೇಲೆ ದೈವಜ್ಞಾನ ಪೂರ್ತಿ ಅಜ್ಞಾನದಿಂದ ಮುಚ್ಚಲ್ಪಟ್ಟು, ಬೋಧಕರೆಲ್ಲರೂ ಅಧರ್ಮಗಳನ್ನು ಬೋಧಿಸುವಾಗ, ಕೆಲವು ಸಂದರ್ಭಗಳಲ್ಲಿ ದೇವರು ತಾನೇ ಭೂಮಿಮೇಲಕ್ಕೆ ಬಂದು ತನ್ನ ಜ್ಞಾನವನ್ನು ತಿಳಿಸುತ್ತಾನೆ. ಆಗ ಅಲ್ಲಿಯವರೆಗು ಬೋಧಕರಾಗಿರುವವರಿಗೆ, ಅಜ್ಞಾನವನ್ನೇ ಜ್ಞಾನವಾಗಿ ಬೋಧಿಸುವವರಿಗೆ, ಇಂದೂ ಧರ್ಮಗಳೆಂಬ ಹೆಸರಿಟ್ಟುಕೊಂಡು ಹೀನ ಧರ್ಮಗಳನ್ನು ಬೋಧಿಸುವ ಬೋಧಕರಿಗೆಲ್ಲ ಒಬ್ಬ ಮಾನವನು, ಯಾವ ಗುರು ಪರಂಪರೆ ಇಲ್ಲದವನು, ಯಾವ ಗುರುಪೀಠಕ್ಕೆ ಸಂಬಂಧವಿಲ್ಲದವನು ಬಂದು, ತಮಗೆ ವಿರುದ್ಧವಾಗಿ ಜ್ಞಾನವನ್ನು ಬೋಧಿಸುವುದನ್ನು ಸಹಿಸಿಕೊಳ್ಳದವರು ಕೆಲವರು, ಮನುಷ್ಯನಾಗಿ ಬಂದವನಿಗೆ ವಿರುದ್ಧವಾಗಿ ಮಾತನಾಡುವುದು, ವೇಧಿಸುವುದು ನಡೆಯುತ್ತಿರುತ್ತದೆ. ಅಂತಹವರನ್ನು ಕುರಿತೇ ನನ್ನ ಶ್ರೇಷ್ಟತ್ವವನ್ನು ತಿಳಿಯದ ಮೂಢರು ನನ್ನನ್ನು ಅವಮಾನಿಸುತ್ತಾರೆಂದು ಭಗವದ್ಗೀತೆ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ ಹನ್ನೊಂದನೆಯ ಶ್ಲೋಕದಲ್ಲಿ ಹೇಳಿದ್ದಾನೆ. ದೇವರು ಸ್ವತಃವಾಗಿ ಭೂಮಿಮೇಲೆ ಬಂದರೂ, ಬಂದಂತೆ ಯಾವ ಆಧಾರವೂ ಸಿಗುವುದಿಲ್ಲ. ಆದ್ದರಿಂದ ಬಹಳಜನ ಮೋಸಹೋಗುವುದಕ್ಕೆ ಅವಕಾಶವಿದೆ. ಅಂತಹ ಮೋಸ ಹೋಗದಂತೆ ಮನುಷ್ಯನಾಗಿ ಬಂದವನು, ಮನುಷ್ಯ ಅಲ್ಲದಿದ್ದರೂ ಮನುಷ್ಯನಾಗಿರುವವನು ತಿಳಿಸುವ ಜ್ಞಾನವನ್ನು ಶ್ರದ್ಧೆಯಿಂದ ಗ್ರಹಿಸಿದವರು ಧನ್ಯರಾಗುತ್ತಾರೆ. ಅಂತಹ ಒಳ್ಳೆಯಕಾಲದಲ್ಲಿ ಆತನಜೊತೆ ಮಾತನಾಡಿದವರು, ಆತನ ಸೇವೆಯಲ್ಲಿ ಪಾಲ್ಗೊಂಡವರು, ಆತನನ್ನು ನೋಡಿದವರು, ಅವರಿಗೆ ತಿಳಿಯದೆಯೇ ಅವರು ಅದೃಷ್ಟವನ್ನು ಹೊಂದಿ ದವರೆಂದು ಹೇಳಬಹುದು. ಎಷ್ಟೋ ಕೋಟಿಜನರಲ್ಲಿ ತಮಗೆ ಮಾತ್ರ ಅಂತಹ ಅವಕಾಶ ಲಭಿಸಿರುವುದಕ್ಕೆ ಅವರು ಪೂರ್ತಿ ಅದೃಷ್ಟವಂತರೇ. ಆದರೂ ಆ ವಿಷಯ ತಿಳಿಯುವುದಕ್ಕೆ ಯಾರಿಗೂ ಅವಕಾಶವಿಲ್ಲ. ಆದರೆ ದೇವರ ಜನ್ಮವನ್ನು ತಿಳಿದು ತಾನು ಎಷ್ಟೋ ಅದೃಷ್ಟವಂತನೆಂದು ಅಂದುಕೊಂಡವನು, ಆತನ

ಕೈಯಲ್ಲಿ ತನ್ನ ಸಾವನ್ನು ಕೋರಿಕೊಂಡವನು, ಮರಣಿಸುವಾಗ ಸಹ ಆತನನ್ನೇ ನೋಡಬೇಕೆಂದು ಕೇಳಿದವನು, ನೀನು ನನಗೆ ಮೋಕ್ಷವನ್ನು ಪ್ರಸಾದಿಸೆಂದು ನೇರವಾಗಿ ಮಾರುವೇಷದಲ್ಲಿರುವ ದೇವರನ್ನು ಕೋರಿದವನು ಚರಿತ್ರೆಯಲ್ಲಿ ಒಬ್ಬನೇ ಒಬ್ಬ ಭೀಷ್ಮನು ಇದ್ದಾನೆಂದು ಮರೆತುಹೋಗಬಾರದು.

ಇಂತಹ ಪ್ರತ್ಯೇಕತೆಯನ್ನು ಹೊಂದಿರುವಂತಹ ದೂತನ ಮೂಲಕ ಜ್ಞಾನವನ್ನು ಹೇಳಿಸುತ್ತೇನೆಂದು ದೇವರು ಹೇಳಿದ ವಿಧಾನವನ್ನು ದೊಡ್ಡದಾಗಿ ಹೇಳಬಹುದು. ದೂತ ಎನ್ನುವ ಪದವನ್ನು ಸೇವೆ ಮಾಡುವವರ ಬಗ್ಗೆ, ತಮ್ಮ ಕಾರ್ಯಗಳನ್ನು ಮಾಡುವವರ ಬಗ್ಗೆ, ತನ್ನ ಸಂದೇಶವನ್ನು ತೆಗೆದುಕೊಂಡುಹೋಗಿ ಇತರರಿಗೆ ಸೇರಿಸಿ ಬರುವವರ ಬಗ್ಗೆ ಬಳಸುತ್ತಿರುವುದರಿಂದ, ಇಲ್ಲಿ ಜ್ಞಾನವನ್ನು ಹೇಳುವ ದೂತನನ್ನು ಸಹ ಒಂದು ಕಾರ್ಯವನ್ನು ಮಾಡುವ ಕೆಲಸದ ಮನುಷ್ಯನಾಗಿ ಕೆಲವರು ಲೆಕ್ಕಿಸಿಕೊಳ್ಳುತ್ತಿದ್ದಾರೆ. ಹಾಗೆ ಮೋಸಹೋಗದಂತೆ ದೂತ ಎಂದರೆ ಯಾವ ದೂತನಾಗಿದ್ದಾನೋ ಅರ್ಥ ಮಾಡಿಕೊಳ್ಳಬೇಕು. 89ನೇ ಸುರಾ 22ನೇ ಆಯತ್‌ನಲ್ಲಿ ದೇವದೂತರು ಬಹಳ ಹೆಚ್ಚಾದಾಗ ನಿನ್ನ ಪ್ರಭುವು ಅವತರಿಸುತ್ತಾನೆಂದು ಇದೆ ಅಲ್ಲವೆ! ಅಲ್ಲಿ ದೂತರನ್ನು ಆತನ ಸೇವಕರನ್ನಾಗಿ ಲೆಕ್ಕಿಸಬೇಕು. ಹೀಗೆ ಸಂದರ್ಭಾನುಸಾರ ಭಾವಿಸಬೇಕು.

**ಪ್ರಶ್ನೆ :–** ಒಂದೇ ದೇವರ ಜ್ಞಾನವನ್ನೇ ಐದುಸಾವಿರ ವರ್ಷಗಳ ಪೂರ್ವದಲ್ಲಿ ಗೀತೆಯಾಗಿ, ಹದಿನಾಲ್ಕುನೂರು ವರ್ಷಗಳ ಪೂರ್ವದಲ್ಲಿ ಖುರಾನ್ ಆಗಿ ಹೇಳಲ್ಪಟ್ಟಾಗ ಎರಡರಲ್ಲಿ ಒಂದೇ ಜ್ಞಾನ ಇರಬೇಕಲ್ಲವೆ! ಹಾಗೆ ಅಲ್ಲದೆ ಗೀತೆಯನ್ನು ಆಶ್ರಯಿಸಿದ ಹಿಂದುಗಳು ಒಂದು ವಿಧವಾಗಿ ಜ್ಞಾನವನ್ನು ಅರ್ಥ ಮಾಡಿಕೊಂಡರೆ, ಖುರ್‌ಆನ್‌ನನ್ನು ಆಶ್ರಯಿಸಿದ ಮುಸ್ಲಿಮ್‌ರು ಅದೇ ಜ್ಞಾನವನ್ನೇ ಮತ್ತೊಂದು ವಿಧವಾಗಿ ಹೇಳಿಕೊಳ್ಳುತ್ತಿದ್ದಾರೆ. ದೇವರು ಒಬ್ಬನೇ ಆದಾಗ, ಜ್ಞಾನ ಒಂದೇ ಆದಾಗ, ಮನುಷ್ಯರೆಲ್ಲರೂ ಒಂದೇ ಜಾತಿಯಾದಾಗ, ಒಂದೇ ಜ್ಞಾನ ಬೇರೆಬೇರೆ ಯಾಗಿ ಮನುಷ್ಯರಿಗೆ ಏಕೆ ಅರ್ಥವಾಗಿದೆ. ಒಂದೇ ಭಾವದಿಂದ ಏಕೆ ಅರ್ಥವಾಗಲಿಲ್ಲ?

**ಉ॥** ದೇವರು ಒಬ್ಬನೇ, ದೇವರ ಜ್ಞಾನ ಒಂದೇ ಆದರೂ, ಮನುಷ್ಯರೆಲ್ಲರೂ ಒಂದೇಯೆಂಬ ಭಾವ ಮನುಷ್ಯರಲ್ಲಿಯೇ ಇಲ್ಲ. ಮನುಷ್ಯರನ್ನು ಮಾಯೆ ಆವರಿಸಿ, ಅಜ್ಞಾನವನ್ನು ಅವರಲ್ಲಿ ಬೆಳೆಸಿ, ಮತ ಎನ್ನುವ ಅಸ್ತ್ರವನ್ನು ಪ್ರಯೋಗಿಸಿ, ನೀವು ಮುಸ್ಲೀಮ್‌ರು ನಾವು ಹಿಂದುಗಳು ಎಂಬ ಭಾವವನ್ನು ಹಿಂದುಗಳಲ್ಲಿಯೂ, ನೀವು ಹಿಂದುಗಳು ನಾವು ಮುಸ್ಲೀಮ್‌ರು ಎಂಬ ಭಾವ ಮುಸ್ಲೀಮ್‌ರಲ್ಲಿಯು ಉಂಟುಮಾಡಿರುವುದರಿಂದ, ಅವರ ವರ್ಗಬೇಧ ಜ್ಞಾನವನ್ನು ಸಹ ಬೇರೆಬೇರೆಯಾಗಿ ಅರ್ಥವಾಗುವಂತೆ ಮಾಡಿದೆ. ಹಾಗೆಂದು ಒಬ್ಬರಿಗೆ ಸಕ್ರಮವಾಗಿ ಅರ್ಥವಾಗಿ, ಮತ್ತೊಬ್ಬರಿಗೆ ಸಕ್ರಮವಾಗಿ ಅರ್ಥ ಆಗಲಿಲ್ಲವೆಂದು ನಾವು ಹೇಳುತ್ತಿಲ್ಲ. ಅವರವರ ಧ್ಯಾಸಗಳು ಅವರವರ ಮತಗಳ ಮೇಲೆ ಇರುವುದರಿಂದ, ಮತ ಧ್ಯಾಸವಿರುವ ಯಾರಿಗಾಗಲಿ, ಮತಾತೀತವಾಗಿರುವ ದೇವರ ಜ್ಞಾನ ಅರ್ಥವಾಗಲಿಲ್ಲ. ಭಗವದ್ಗೀತೆ ಸಂಪೂರ್ಣವಾಗಿ ದೇವರು ಹೇಳಿದ ಭಾವದಿಂದ ಹಿಂದುಗಳಿಗು ಅರ್ಥವಾಗದೆ, ಹಾಗೆಯೇ ಖುರಾನ್ ಗ್ರಂಥದಲ್ಲಿ ಹೇಳಲಾದ ಜ್ಞಾನ ಸಂಪೂರ್ಣವಾಗಿ ಮುಸ್ಲಿಮ್‌ರಿಗು ಸಹಾ ಅರ್ಥವಾಗಲಿಲ್ಲ. ಅವರವರ ಮತವನ್ನು ಅನುಸರಿಸಿದ ಭಾವಗಳನ್ನು ಇಬ್ಬರು ಹೇಳಿಕೊಳ್ಳುತ್ತಿರುವುದರಿಂದ, ಅಸಲಾದ ಭಾವ ಮರೆಯಲ್ಲಿಬಿದ್ದು, ಎರಡು ಕಡೆ ಎರಡು ವರ್ಗಗಳವರಿಗೆ ಜ್ಞಾನ ಅರ್ಥವಾಗದೆ ಹೋಗಿದೆ. ನಮ್ಮ ಮಾತು ನಿಜವೆಂದು ತಿಳಿಯುವುದಕ್ಕೆ ಉದಾಹರಣೆಯಾಗಿ ಎರಡು ಗ್ರಂಥಗಳಲ್ಲಿರುವ ಒಂದೇ ವಿಷಯವನ್ನು ತೆಗೆದು ಕೊಂಡು ಎರಡು ವರ್ಗದವರಿಗೂ ಹೇಗೆ ಅರ್ಥವಾಗಿದೆಯೊ ನೋಡೋಣ.

ದೇವರು ಆತ್ಮಸ್ವರೂಪನು, ಸೃಷ್ಠಿಗೆ ಪೂರ್ವದಲ್ಲಿ ಏಕವಾಗಿರುವ ದೇವರು ಸೃಷ್ಠಿ ನಂತರ ಮೂರು ಆತ್ಮಗಳಾಗಿ ವಿಭಜನೆಗೊಂಡಿದ್ದಾನೆ.. ತನ್ನ ಸೃಷ್ಠಿ ಎಲ್ಲವನ್ನು ಹೆಚ್ಚಾಗಿ ಮೂರು ಸಂಖ್ಯೆಯಿಂದಲೇ ಮುಡಿಹಾಕಿದ್ದಾನೆ. ಮೂರು ಆತ್ಮಗಳಾಗಿ ವಿಭಜಿಸಿ ಮೂರನೆ ಆತ್ಮವಾದ ಪರಮಾತ್ಮನಾಗಿ ತಾನಿದ್ದು ತನ್ನ ಶಕ್ತಿಯನ್ನು ತುಂಬಿದ ಆತ್ಮವನ್ನು ಎರಡನೆಯದಾಗಿ, ಕರ್ಮವನ್ನು ತಗುಲಿಸಿದ ಆತ್ಮವಾಗಿ ಮೊದಲ ಜೀವಾತ್ಮವನ್ನು ಇಟ್ಟಿದ್ದಾನೆ. ಜೀವಾತ್ಮ, ಆತ್ಮ,

ಪರಮಾತ್ಮಯೆಂದು ಕ್ರಮವಾಗಿ ಹೇಳಲಾದ ಮೂರು ಆತ್ಮಗಳು ವಿನಹ, ಪ್ರಪಂಚದಲ್ಲಿ ಇರುವುದೆಲ್ಲಾ ಆತ್ಮಗಳ ಸ್ವರೂಪವಲ್ಲದ ಪ್ರಕೃತಿಯೆಂದು ತಿಳಿಯಬೇಕು. ಪ್ರಕೃತಿ ಮನುಷ್ಯನಲ್ಲಿ ಮೂರು ಗುಣಗಳಾಗಿದ್ದು, ಉಳಿದ ಪ್ರಪಂಚವೆಲ್ಲಾ ತುಂಬಿದೆ. ಪ್ರಪಂಚದಲ್ಲಿ ಮೂರು ಆತ್ಮಗಳು ಅಲ್ಲದೆ ಉಳಿದ ಸಮಸ್ತವನ್ನು ಪ್ರಕೃತಿಯೆಂದು ಹೇಳಬಹುದು. ಪ್ರಕೃತಿಯಾದ ಸಮಸ್ತ ವಸ್ತುಜಾಲವನ್ನು ಮೂರನೆ ಆತ್ಮವಾದ ಪರಮಾತ್ಮ ಅವರಿಸಿ ಅಣುವಣುವಿನಲ್ಲಿ ವ್ಯಾಪಿಸಿದೆ. ಈ ವಿಧವಾಗಿ ಸೃಷ್ಠಿಯೆಲ್ಲವೂ ಪರಮಾತ್ಮ ವ್ಯಾಪಿಸಿದೆ. ಉಳಿದ ಜೀವಾತ್ಮ, ಆತ್ಮಗಳಲ್ಲಿ ಸಹಾ ಪರಮಾತ್ಮ ವ್ಯಾಪಿಸಿದೆ ಎಂದು ಹೇಳಬಹುದು.

ಪರಮಾತ್ಮಕ್ಕೂ, ಆತ್ಮಕ್ಕೂ, ಜೀವಾತ್ಮಕ್ಕೂ ಗಣಿತಶಾಸ್ತ್ರದಲ್ಲಿ ಸಂಖ್ಯೆಗಳನ್ನು ನಿಗಧಿಪಡಿಸಿರುವುದು ನಡೆದಿದೆ. ಜ್ಞಾನಿಗಳಾದ ಹಿರಿಯರು ಎಷ್ಟೋ ಯೋಚಿಸಿ ಜೀವಾತ್ಮನಿಗೆ ಮೂರು (3) ಸಂಖ್ಯೆಯನ್ನೂ, ಆತ್ಮನಿಗೆ (6) ಸಂಖ್ಯೆಯನ್ನೂ, ಪರಮಾತ್ಮನಿಗೆ ಒಂಭತ್ತು (9) ಸಂಖ್ಯೆಯನ್ನು ಗುರುತಾಗಿ ಇಟ್ಟುಕೊಂಡಿದ್ದಾರೆ. 3 6 9 ಎಂದರೆ ಜೀವಾತ್ಮ, ಆತ್ಮ, ಪರಮಾತ್ಮ ಎಂಬ ಮೂರು ಆತ್ಮಗಳೆಂದು ಅರ್ಥವಾಗುವಂತೆ ಮಾಡಿದ್ದಾರೆ. ಒಂದುವೇಳೆ 9 6 3 ಎಂದು ಹೇಳಿದರೂ ಪರಮಾತ್ಮ, ಆತ್ಮ, ಜೀವಾತ್ಮಯೆಂದು ಅರ್ಥವಾಗುವಂತೆ ಮಾಡಿದ್ದಾರೆ. ಈ ಸಂಖ್ಯೆಗಳನ್ನು ಹೇಗೆ ಗುರುತಿಸಿರುವುದು, ಯಾವ ಪದ್ಧತಿಯನ್ನು ಅನುಸರಿಸಿ ಗುರುತಿಸಿರುವುದು ನಮ್ಮ ರಚನೆಯಲ್ಲಿನ **"ಹೇತುವಾದ-ಪ್ರತಿವಾದ"** ಎನ್ನುವ ಗ್ರಂಥದಲ್ಲಿ ಇದೆ. ಆ ವಿಧವಾಗಿ ಸಂಖ್ಯೆಗಳನ್ನು ಗುರುತಿಸುವಂತೆ ಮಾಡಿರುವುದು ದೇವರೇ ಎಂದು, ದೇವರಿಗೆ ತಿಳಿಯದಂತೆ, ದೇವರ ಆಜ್ಞೆ ಇಲ್ಲದೆ ಏನು ನಡೆಯುವುದಿಲ್ಲವೆಂದು ಜ್ಞಾಪಕ ಇಟ್ಟುಕೊಳ್ಳಬೇಕು. ಸೃಷ್ಠಿಯೆಲ್ಲವೂ ಮೂರು ಆತ್ಮಗಳು ಒಂದು ಪ್ರಕೃತಿ ತುಂಬಿದೆ. ಪ್ರಕೃತಿಯನ್ನು ಸಹಾ ಮೊದಲು ದೇವರು ತನ್ನಿಂದಲೇ ಸೃಷ್ಠಿಸಿದ್ದಾನೆ. ಸಂಖ್ಯೆಗಳಲ್ಲಿ ದೊಡ್ಡ ಸಂಖ್ಯೆ ಎಂದಿಗೂ ಬೆಲೆ ಬದಲಾಗದ ಸಂಖ್ಯೆ ಒಂಭತ್ತಾಗಿರುವುದರಿಂದ ಒಂಭತ್ತನ್ನು ಪರಮಾತ್ಮನಾಗಿ

ಗುರುತಿಸುವುದು ನಡೆದಿದೆ. ಪರಮಾತ್ಮ ಆತ್ಮಗಿಂತ ಬೇರೆಯಾಗಿದ್ದಾನೆ. ಆದ ಕಾರಣ ಪರಮ+ಆತ್ಮ=ಪರಮಾತ್ಮಯೆಂದು ಕರೆಯಲ್ಪಡುತ್ತಿದ್ದಾನೆ. ಪರಮಾತ್ಮ ಎನ್ನುವುದು ಅರ್ಥವನ್ನು ತಿಳಿಸುವ ಪದವೇಯಾಗಲಿ ಹೆಸರಲ್ಲ. ಹಾಗೆ ದೇವರು ಎಂದರೆ ದೇವಲ್ಪಡು (ಹುಡುಕಲ್ಪಡು) ವವನೆಂದು ಅರ್ಥವಾಗಲಿ ಅದು ಹೆಸರು ಅಲ್ಲ. ಈ ವಿಧವಾಗಿ ದೇವರಿಗೆ ಹೆಸರು ಏನೂ ಇಲ್ಲ. ಹೆಸರು ಇಲ್ಲದ ದೇವರು ಪ್ರತ್ಯೇಕವಾಗಿದ್ದಾನೆ. ಹೆಸರಿರುವ ಆತ್ಮ, ಜೀವಾತ್ಮಗಳು ಎರಡು ಒಂದೇಕಡೆ, ಒಂದೇ ಶರೀರದಲ್ಲಿ ಬೆರೆತಿವೆ. ಆದ್ದರಿಂದ ಈ ಎರಡು ಆತ್ಮಗಳನ್ನು ಜೋಡಿ ಆತ್ಮಗಳೆಂದು ಎನ್ನುತ್ತೇವೆ. ಪರಮಾತ್ಮ ಪ್ರಪಂಚವೆಲ್ಲಾ ಅಣುಅಣುವಿನಲ್ಲಿ ವ್ಯಾಪಿಸಿರುವಾಗ, ಜೀವಾತ್ಮ ಆತ್ಮಗಳು ಒಂದು ಶರೀರವನ್ನು ಆಶ್ರಯಿಸಿವೆ. ಹಾಗಿರುವ ಎರಡು ಆತ್ಮಗಳಲ್ಲಿ ಜೀವಾತ್ಮ ಏನು ಮಾಡದಿರುವುದಾಗಿ, ಶರೀರದಲ್ಲಿ ಒಂದುಕಡೆ ಮಾತ್ರವಿದೆ. ಆದರೆ ಎರಡನೆಯದಾದ ಆತ್ಮ ಶರೀರವೆಲ್ಲಾ ವ್ಯಾಪಿಸಿ, ಶರೀರಕ್ಕೆ ಶಕ್ತಿಯನ್ನು ಕೊಟ್ಟು ಕದಲಿಸಿ ಕೆಲಸ ಮಾಡಿಸುತ್ತಾ ನಡೆಸುತ್ತಿದೆ. ಆತ್ಮ ಮಾಡುತ್ತಿರುವಾಗ ನಡೆದ ಕೆಲಸದಲ್ಲಿರುವ ಕಷ್ಟ ಸುಖಗಳನ್ನು ಜೀವಾತ್ಮ ಅನುಭವಿಸುವುದು ಹೊರತು, ಬೇರೆ ಕೆಲಸವಂತೂ ಏನು ಜೀವಿಗೆ ಇಲ್ಲ. ಶರೀರದಲ್ಲಿ ಸಹ ದೇವರಾದ ಪರಮಾತ್ಮ ಅಣುಅಣುವಿನಲ್ಲಿ ವ್ಯಾಪಿಸಿರುವಾಗ, ಆತ್ಮ ಶರೀರವೆಲ್ಲಾ ವ್ಯಾಪಿಸಿದೆ. ಜೀವಿಯು ಒಂದುಕಡೆ ರವೆಯಷ್ಟು ಇದ್ದಾನೆ. ದೇವರು (ಪರಮಾತ್ಮ) ಶರೀರದೊಳಗೆ, ಶರೀರದ ಹೊರಗೆ ಸೃಷ್ಠಿ ಎಲ್ಲವೂ ವ್ಯಾಪಿಸಿರುವಾಗ, ಆತ್ಮ ಕೇವಲ ಶರೀರದಲ್ಲಿ ಮಾತ್ರ ವ್ಯಾಪಿಸಿರುವಾಗ, ಜೀವಾತ್ಮ ಶರೀರದಲ್ಲಿ ಒಂದುಕಡೆ ಸೂಜಿಮೊನೆಯಷ್ಟು ಜಾಗದಲ್ಲಿ ರವೆಯಷ್ಟು ಇದೆ. ಜೀವಿಗೆ ಶರೀರದಲ್ಲಿ ಕರ್ಮವನ್ನು ಅನುಭವಿಸುವುದು ಹೊರತು ಬೇರೆ ಕೆಲಸವಂತೂ ಏನು ಇಲ್ಲ. ಹಾಗೆ ಕೆಲಸ ಇಲ್ಲದವನು ದೇವರು. ದೇವರು ಸರ್ವಪ್ರಪಂಚವನ್ನು ವ್ಯಾಪಿಸಿದ್ದು ಸಾಕ್ಷಿಯಾಗಿ ಎಲ್ಲವನ್ನು ನೋಡುತ್ತಿದ್ದಾನೆ ಹೊರತು ಯಾವ ಕಾರ್ಯವನ್ನು ಮಾಡಲಿಲ್ಲ. ಆದ್ದರಿಂದ ದೇವರನ್ನು ರೂಪ, ನಾಮ, ಕ್ರಿಯಗಳು ಇಲ್ಲದವನೆಂದು ಹೇಳಬಹುದು.

ಜೀವಾತ್ಮ, ಪರಮಾತ್ಮ (ಜೀವಿಯು, ದೇವರು) ಇಬ್ಬರೂ ಕೆಲಸ ಇಲ್ಲದವರಾಗಿದ್ದೂ, ಮಧ್ಯದಲ್ಲಿರುವ ಆತ್ಮ ಮಾತ್ರ ಒಂದು ಕ್ಷಣವೂ ಸಹ ಸುಮ್ಮನಿರದೆ ಶರೀರದಲ್ಲಿ ಎಲ್ಲಕಾಲದಲ್ಲಿ ಕೆಲಸ ಮಾಡುತ್ತಿದೆ. ಎಚ್ಚರ, ಸ್ವಪ್ನ, ನಿದ್ರೆ ಎನ್ನುವ ಮೂರು ಸ್ಥಿತಿಗಳಲ್ಲಿ ಆತ್ಮ ಕೆಲಸ ಮಾಡುತ್ತಲೇ ಇದೆ. ನಿದ್ರೆಯಲ್ಲಿ ಸಹ ಶ್ವಾಸವನ್ನು ಆಡಿಸುವುದು, ಜೀರ್ಣ ಮಾಡುವುದು ಮೊದಲಾದ ಶರೀರ ಕಾರ್ಯಗಳನ್ನು ಎಷ್ಟನ್ನೋ ಮಾಡುತ್ತಾ ಕ್ಷಣಕಾಲ ಸಹ ಸುಮ್ಮನಿರುವುದಿಲ್ಲ. ಶರೀರದಲ್ಲಿ ಜೀವಿಯು ಮಾಡದಿದ್ದರೂ ಎಲ್ಲಾ ಕಾರ್ಯಗಳನ್ನು ಆತ್ಮೇ ಮಾಡುತ್ತಾ ಜನ್ಮದಿಂದ ಮರಣದವರೆಗು, ನಿದ್ರೆಯಿಂದ ಎಚ್ಚರದವರೆಗು, ಹಾಗೆ ಮರಣದಿಂದ ಜನ್ಮದವರೆಗು, ಎಚ್ಚರದಿಂದ ನಿದ್ರೆವರೆಗು ಜೀವಿಯನ್ನು ನಡೆಸಿ ಎಲ್ಲವನ್ನು ಬಲವಂತವಾಗಿ ಅನುಭವಿಸುವಂತೆ ಮಾಡುತ್ತಿದೆ. ಈ ವಿಧವಾಗಿ ಆತ್ಮ ಜೀವಿಯ ಹಿಂದೆಯಿದ್ದು ನಡೆಸುತ್ತಿದೆ. ಪ್ರಪಂಚದಲ್ಲಿ ಯಾವ ಶರೀರ ಹೇಗೆ ನಡೆಯುತ್ತಿರು ವುದು, ಆತ್ಮ ಹೇಗೆ ನಡೆಸುತ್ತಿರುವುದು, ಜೀವಿಯು ಎಲ್ಲಾ ಅನುಭವಿಸುತ್ತಾ ಯಾವ ಭಾವದಿಂದಿರುವುದು, ಎಲ್ಲವನ್ನು ದೇವರು ಪ್ರತಿ ಶರೀರದಲ್ಲಿಯೂ ಗಮನಿಸುತ್ತಿದ್ದಾನೆ. ಆದ್ದರಿಂದ ಗೀತೆಯಲ್ಲಿ ದೇವರು ಸಾಕ್ಷಿಯಾಗಿದ್ದಾನೆಂದು ಅರ್ಥವಾಗುವಂತೆ ಹೇಳಲಾಗಿದೆ. ಶರೀರದಲ್ಲಿ ಜೀವಾತ್ಮ ಕುರುಡನು, ಕುಂಟನು, ಮೂಗನು ಒಟ್ಟು ಕದಲದ ಮೆದಲದ  ಅಂಗವಿಕಲನಂತೆ ಇರುವಾಗ, ಶರೀರಕ್ಕೆ ದೊಡ್ಡವನಾಗಿ ಶರೀರವೆಲ್ಲಾ ವ್ಯಾಪಿಸಿರುವ ಆತ್ಮ ಶರೀರಕ್ಕಿರುವ ಅವಯವಗಳನ್ನು ಉಪಯೋಗಿಸಿಕೊಂಡು ಶರೀರವನ್ನು ಅದರಲ್ಲಿನ ಜೀವಿಯನ್ನು ನಡೆಸುತ್ತಿದೆ. ಶರೀರಕ್ಕೆ ಅಧಿಪತಿ, ಅಧಿಕಾರಿ ಆತ್ಮನಾಗಿದ್ದು ಜೀವಾತ್ಮ, ಆತ್ಮ ತಿಳಿಸುವ ಸಮಾಚಾರದಿಂದ ಬದುಕುತ್ತಿದೆ. ಆತ್ಮವನ್ನು, ಜೀವಾತ್ಮವನ್ನು ನೋಡುತ್ತಿರುವವನು ದೇವರು (ಪರಮಾತ್ಮ).

ಈ ವಿಧವಾಗಿ ಸೃಷ್ಠಿಯಲ್ಲಿನ ಸರ್ವ ಜೀವಿರಾಶಿಗಳ ಶರೀರದಲ್ಲಿ ಜೀವಾತ್ಮ ಆತ್ಮಗಳು ಜೋಡಿ ಆತ್ಮಗಳಾಗಿ ಇರುವಾಗ, ಅವುಗಳ ಜೊತೆ ಎಂತಹ ಸಂಬಂಧ ಇಲ್ಲದಂತೆ, ಯಾವ ಸಲಹೆ ಕೊಡದಂತೆ ಕೇವಲ ಸಾಕ್ಷಿಯಾಗಿ

ಪರಮಾತ್ಮ ಇದ್ದಾನೆಂದು ತಿಳಿದುಹೋಗಿದೆ ಅಲ್ಲವೆ! ಇದೇ ವಿಧಾನವನ್ನೇ ತಿಳಿಸುವಂತೆ ದೇವರು ಪ್ರತಿ ಮನುಷ್ಯನ ಹಸ್ತದಲ್ಲಿಯೂ ಮೂರು ಆತ್ಮಗಳ ಗುರುತಾಗಿ ಮೂರು ರೇಖೆಗಳನ್ನು ಇಟ್ಟಿದ್ದಾನೆ. ಅಂಗೈಯಲ್ಲಿ ಕೆಳಗಿರುವ ಎರಡು ರೇಖೆಗಳು ಒಂದು ತುದಿಯಲ್ಲಿ ಒಂದಕ್ಕೊಂದು ಕೂಡಿವೆ. ಹಾಗೆ ಕೂಡಿರುವಂತೆ ಎರಡು ಜೋಡಿ ರೇಖೆಗಳನ್ನು ಜೀವಾತ್ಮ ಆತ್ಮಗಳಾಗಿ ಹಿರಿಯರು ಗುರುತಿಸಿದ್ದಾರೆ. ಕೆಳಗೆ ಪ್ರಾರಂಭವಾದ ಕೆಳಗಿನ ರೇಖೆ ಜೀವಾತ್ಮನಾಗಿಯೂ, ಪಕ್ಕದಲ್ಲಿ ಪ್ರಾರಂಭವಾದ ಅಥವಾ ಮೊದಲನೆಯದಕ್ಕಿಂತ ಮೇಲಿರುವ ರೇಖೆ ಆತ್ಮವಾಗಿಯೂ ಲೆಕ್ಕಿಸಲ್ಪಡುತ್ತಿದೆ. ಈ ಎರಡು ರೇಖೆಗಳು ಹೆಬ್ಬೆರಳಿಗೆ ಮೇಲಿನ ಭಾಗದಲ್ಲಿ ಒಂದಕ್ಕೊಂದು ಕೂಡಿ ಅಥವಾ ಹತ್ತಿರವಾಗಿದ್ದು ಜೊಡಿ ಆತ್ಮಗಳಾಗಿ ಹೆಸರುವಾಸಿಯಾಗಿವೆ. ಈ ಎರಡು ರೇಖೆಗಳಿಗಿಂತ ಮೇಲೆ ಪ್ರತ್ಯೇಕವಾಗಿರುವ ಒಂದು ರೇಖೆ ಯಾವುದರ ಜೊತೆ ಸೇರದಂತಿರುವುದು ವಿಶೇಷ. ಹಾಗೆ ವಿಶೇಷವಾಗಿರುವ ಮೂರನೆರೇಖೆಯೇ ಶರೀರದಲ್ಲಿನ ಪರಮಾತ್ಮನಾಗಿ ಹೇಳಲಾಗುತ್ತಿದೆ. ಶರೀರದಲ್ಲಿ ಕಾರ್ಯಗಳು ಮಾಡುವ ಕರ್ಮೇಂದ್ರಿಯಗಳಲ್ಲಿ ಮುಖ್ಯವಾದುದು ಹಸ್ತ. ಹಸ್ತದಲ್ಲಿ (ಅಂಗೈಯಲ್ಲಿ) ಮೂರು ರೇಖೆಗಳು ಮೂರು ಆತ್ಮಗಳಿಗೆ ಗುರುತಾಗಿರುವುದರಿಂದ, ಪೂರ್ವದಲ್ಲಿ ನಿದ್ರೆಯಿಂದ ಏಳುತ್ತಲೇ ಯಾರ ಮುಖವನ್ನು ನೋಡದಂತೆ, ತನ್ನ ಹಸ್ತವನ್ನು ನೋಡಿಕೊಳ್ಳಿರೆಂದು ಹಿರಿಯರು ಹೇಳಿ, ಬಹಳಜನರಿಗೆ ಹಾಗೆ ನೋಡಿಕೊಳ್ಳವುದನ್ನು ಅಭ್ಯಾಸ ಮಾಡಿದ್ದಾರೆ. ನಾವು ಚಿಕ್ಕ ವಯಸ್ಸಿನಲ್ಲಿರುವಾಗ ಸಹ ಮುಂಜಾನೆ ನಿದ್ರೆಯಿಂದ ಏಳುತ್ತಲೇ ಅಂಗೈಯನ್ನು ನೋಡುಕೊಳ್ಳುವವರನ್ನು ಬಹಳಜನರನ್ನು ನೋಡಿದ್ದೇವೆ. ಏಕೆ ಹಾಗೆ ಮಾಡುತ್ತಿದ್ದಾರೆಂದು ಸಹ ಕೆಲವರನ್ನು ಕೇಳಿದ್ದೇವೆ. ಆದರೆ ಅವರು ಆ ದಿನ ಸರಿಯಾದ ಸಮಾಧಾನ ಹೇಳಲಿಲ್ಲ. ಮೊದಲು ತನ್ನ ಕೈಗಳನ್ನು ನೋಡಿಕೊಳ್ಳುವುದರಿಂದ ನಂತರ ಇತರರನ್ನು ನೋಡಿದರೂ, ಅವರಿಂದ ಉಂಟಾಗುವ ಕೆಟ್ಟದು ಹೋಗುತ್ತದೆಂದು ಹೇಳಿದ್ದಾರೆ. ಆಗ ಅದೇ ನಿಜವೆಂದು ನಂಬಿದ್ದೆವು. ಈ ದಿನ ಅದು ಅಸತ್ಯವೆಂದು ತಿಳಿದಿದೆ. ಮುಂಜಾನೆ

ಮೊದಲು ಹಸ್ತದಲ್ಲಿನ ಮೂರು ರೇಖೆಗಳನ್ನು ನೋಡುವುದರಿಂದ ತಾನು ಜೀವಾತ್ಮನೆಂದು, ತನ್ನನ್ನು ಆತ್ಮ ನಡೆಸುತ್ತಿದೆ ಎಂದು, ಪರಮಾತ್ಮ ಎಲ್ಲವನ್ನು ಗಮನಿಸುವ ಸಾಕ್ಷಿಯಾಗಿದ್ದಾನೆಂಬ ಜ್ಞಾನ ಜ್ಞಾಪಕ ಬರುತ್ತದೆಂದು, ದೇವರ ಗುರುತು ಬರುವಂತೆ ಹಿರಿಯರು ಹಾಗೆ ಕೈಗಳನ್ನು ನೋಡಿಕೊಳ್ಳಿರೆಂದು ಹೇಳಿರುವಾಗ, ಸ್ವಲ್ಪ ಕಾಲಕ್ಕೆ ಅದರ ವಿವರ ಮರೆತುಹೋಗಿ ಕೊನೆಗೆ ಅರ್ಥಹೋಗಿ ಮನುಷ್ಯರ ಹತ್ತಿರ ಕಾರ್ಯಾಚರಣೆ ಒಂದು ಉಳಿದಿದೆ. ಈಗಿನ ಕಾಲದಲ್ಲಿ ಕೈಗಳನ್ನು ನೋಡಿಕೊಳ್ಳುವ ಕಾರ್ಯಾಚರಣೆ ಸಹಾ ಹೋಗಿದೆ.

ಶರೀರದಲ್ಲಿನ ಐದು ಕರ್ಮೇಂದ್ರಿಯಗಳಲ್ಲಿ ಹಸ್ತ ಪ್ರಧಾನವಾದುದು. ಆದ ಕಾರಣ ಮೂರು ಆತ್ಮಗಳ ಗುರುತನ್ನು ಮೂರು ರೇಖೆಗಳಾಗಿ ಹಸ್ತದಲ್ಲಿ ದೇವರಿಟ್ಟು ತೋರಿಸಿದ್ದಾನೆ. ಹಾಗೇ "ಜ್ಞಾನೇಂದ್ರಿಯಾನಾಂ ನಯನಂ ಪ್ರಧಾನಮ್" ಎನ್ನುವಂತೆ ಐದು ಜ್ಞಾನೇಂದ್ರಿಯಗಳಲ್ಲಿ ಕಣ್ಣು ಪ್ರಧಾನವಾದುದು. ಆದ್ದರಿಂದ ಹಸ್ತದಲ್ಲಿರುವಂತೆ ಕಣ್ಣಿನಲ್ಲಿ ಸಹ ಮೂರು ಆತ್ಮಗಳ ಗುರುತನ್ನು ದೇವರಿಟ್ಟಿದ್ದಾನೆ. ಕಣ್ಣಿನಲ್ಲಿ ಕಣ್ಣುಗುಡ್ಡನ್ನು ಪರಿಶೀಲಿಸಿ ನೋಡಿದರೆ ಮೊದಲು ಬಿಳಿಕಣ್ಣು, ಬಿಳಿಕಣ್ಣಲ್ಲಿ ಕಪ್ಪುಕಣ್ಣು, ಕಪ್ಪುಕಣ್ಣಿನಲ್ಲಿ ಪೂರ್ತಿ ಚಿಕ್ಕದಾಗಿದ್ದು ಕಣ್ಣಪಾಪೆ ಎನ್ನುವ ಹೆಸರಿನಿಂದ ಹೆಸರುಕಾಳಿನಷ್ಟು ಅಥವಾ ಸಾಸಿವೆಕಾಳಿನಷ್ಟು ಕಪ್ಪುಕಣ್ಣು ಇರುತ್ತದೆ. ಮೊದಲು ಬೆಳ್ಳಗಿರುವ ಬಿಳಿಕಣ್ಣನ್ನು ಪರಮಾತ್ಮನಾಗಿ, ಅದರ ನಂತರ ಬಿಳಿಕಣ್ಣು ಮಧ್ಯದಲ್ಲಿ ದುಂಡಾಗಿ ಕಪ್ಪಗೆ ಅರ್ಧ ಅಂಗುಲಕ್ಕೆ ಕಡಿಮೆ ವಿಸ್ತೀರ್ಣವಿರುವ ಕಪ್ಪುಗುಡ್ಡೆಯನ್ನು ಆತ್ಮನಾಗಿ, ಕಪ್ಪುಗುಡ್ಡೆ ಮಧ್ಯದಲ್ಲಿ ಸಾಸಿವೆಕಾಳಿನಷ್ಟು ಕಪ್ಪಗಿರುವ ಚಿಕ್ಕ ದುಂಡನೆಯ ಭಾಗವನ್ನು ಜೀವಾತ್ಮನಾಗಿ ಹಿರಿಯರು ಲೆಕ್ಕಿಸಿ ಜ್ಞಾನ ತಿಳಿಯದವರಿಗೆ ತೋರಿಸಿ ನಿನ್ನ ಕಣ್ಣಿನಲ್ಲಿ ಜೀವಾತ್ಮ, ಆತ್ಮ, ಪರಮಾತ್ಮಗಳ ಗುರುತು ಇದೆಯೆಂದು, ಪ್ರತಿ ದಿನ ಬಿಡುವಿರುವಾಗ, ಕನ್ನಡಿ ನೋಡಿಕೊಂಡಾಗ ದೃಷ್ಠಿಯಲ್ಲಿ ದೃಷ್ಠಿಯನ್ನು ಇಟ್ಟು ನೋಡು ಎಂದು ಹೇಳಿದ್ದಾರೆ. ಮತ್ತೆ ಕೆಲವರು ಜ್ಞಾನಿಗಳು ರೂಪವನ್ನು ದೃಷ್ಠಿಯನ್ನು ಏಕವಾಗಿ ನೋಡೆಂದು ಹೇಳಿದ್ದಾರೆ. ಈ ವಿಧವಾಗಿ ನಿನ್ನ ದೃಷ್ಠಿಯಿಂದ ನಿನ್ನ ಕಣ್ಣನ್ನು ನೋಡೆಂದು, ಹಾಗೆ

ನೋಡುವುದರಿಂದ ದೇವರು, ಜೀವಿಯು, ಮಧ್ಯದಲ್ಲಿ ಆತ್ಮ ಇದೆಯೆಂದು ತಿಳಿಯುತ್ತದೆಂದು ಹೇಳಿದ್ದಾರೆ. ಹಾಗೆ ಹಿರಿಯರು ಹೇಳುವುದರಿಂದ ಪೂರ್ವದಲ್ಲಿ ತನ್ನ ಕಣ್ಣನ್ನು ತಾನೇ ಕನ್ನಡಿಯಲ್ಲಿ ನೋಡುವುದು ಮಾಡುತ್ತಿದ್ದರು. ಕನ್ನಡಿ ಇಲ್ಲದ ಕಾಲದಲ್ಲಿ ಎದುರಿಗಿರುವ ಮನುಷ್ಯನ ಕಣ್ಣಿನೊಳಗೆ ನೇರವಾಗಿ ನೋಡುತ್ತಿದ್ದರು. ಅದನ್ನೇ ಪೂರ್ವದಲ್ಲಿ ದೃಷ್ಠಿಯಲ್ಲಿ ದೃಷ್ಠಿಯಿಟ್ಟು ನೋಡುವು ದೆಂದು ಎನ್ನುತ್ತಿದ್ದರು. ಈ ವಿಧವಾಗಿ ಶರೀರದಲ್ಲಿನ ಮೂರು ಆತ್ಮಗಳನ್ನು ಕರ್ಮೇಂದ್ರಿಯವಾದ ಹಸ್ತದಲ್ಲಿಯೂ, ಜ್ಞಾನೇಂದ್ರಿಯವಾದ ಕಣ್ಣಿನಲ್ಲಿಯೂ ದೊಡ್ಡವರು ಗುರುತಿಸಿ ತೋರಿಸಿದ್ದಾರೆ. ಪ್ರಸ್ತುತ ಕಾಲದಲ್ಲಿ ಮನುಷ್ಯರೆಲ್ಲರೂ ಹಸ್ತವನ್ನು, ಕಣ್ಣನ್ನು ಹೊಂದಿದ್ದರೂ ಅವುಗಳಲ್ಲಿರುವ ಮೂರು ಗುರುತುಗಳನ್ನು ತಿಳಿಯದಂತಿದ್ದಾರೆ.

ಪ್ರತಿ ಶರೀರದಲ್ಲಿಯೂ ಮೂರು ಆತ್ಮಗಳಿವೆಯೆಂದು ಅದರಲ್ಲಿ ನಡೆಸಲ್ಪಡುವ ಜೀವಾತ್ಮ ಒಂದನೆಯದೆಂದು, ನಡೆಸುವ ಆತ್ಮ ಎರಡನೆಯದೆಂದು, ಎರಡನ್ನು ನೋಡುತ್ತಾ ಸುಮ್ಮನಿರುವ ಪರಮಾತ್ಮ ಮೂರನೆಯದೆಂದು ಆಧ್ಯಾತ್ಮಿಕ ವಿದ್ಯೆಯಲ್ಲಿ ಮುಖ್ಯವಾಗಿ ತಿಳಿಯಲ್ಪಡುತ್ತಿದೆ. ಇದೇ ಮೂರು ಆತ್ಮಗಳ ವಿಷಯವನ್ನೇ ಬ್ರಹ್ಮವಿದ್ಯಾ ಶಾಸ್ತ್ರಗಳಾದ ಭಗವದ್ಗೀತೆಯಲ್ಲಿಯೂ, ಖುರ್‌ಆನ್ ಗ್ರಂಥದಲ್ಲಿಯು ಹೇಳಲಾಗಿದೆ. ಭಗವಂತನಾದ ಶ್ರೀಕೃಷ್ಣನು ಹೇಳಿದ ಭಗವದ್ಗೀತೆ ಯಲ್ಲಿ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ 16, 17 ಶ್ಲೋಕಗಳಲ್ಲಿ ಮೂರು ಆತ್ಮಗಳನ್ನು ಮೂವರು ಪುರುಷರಾಗಿ ಹೋಲಿಸಿ ಹೇಳಲಾಗಿದೆ.

**16 ಶ್ಲೋ॥ ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರ ಸ್ಸರ್ವಾಣಿ ಭೂತಾನಿ ಕೂಟಸ್ಥೋಕ್ಷರ ಉಚ್ಯತೇ॥**

**17 ಶ್ಲೋ॥ ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ॥**

**ಭಾವಾರ್ಥ :–** "ಲೋಕದಲ್ಲಿ ಎರಡು ವಿಧಗಳ ಪುರುಷರು (ಆತ್ಮಗಳು) ಇದ್ದಾರೆ. ಅವರನ್ನು ಕ್ಷರನು, ಅಕ್ಷರನೆಂದು ಹೇಳುತ್ತಿದ್ದೇವೆ. ಕ್ಷರನು ಎನ್ನುವವನು ಸರ್ವಜೀವರಾಶಿಗಳ ಶರೀರಗಳಲ್ಲಿ ಇದ್ದಾನೆ. ಅಕ್ಷರನೆಂಬುವವನು ಕ್ಷರನಜೊತೆ ಸೇರಿ ಅದೇ ಶರೀರದಲ್ಲಿ ನಿವಾಸಿಸುತ್ತಿದ್ದಾನೆ." "ಕ್ಷರನು ಅಕ್ಷರನು ಎನ್ನುವ ಇಬ್ಬರು ಪುರುಷರಿಗಿಂತ ಮತ್ತೊಬ್ಬ ಪುರುಷನು ಇದ್ದಾನೆ. ಮೂರನೆ ಪುರುಷನು ಕ್ಷರನಿಗಿಂತ ಮತ್ತು ಅಕ್ಷರನಿಗಿಂತ ಉತ್ತಮನು. ಆದ್ದರಿಂದ ಆತನು ಪುರುಷೋತ್ತಮನೆಂದು, ಪರಮಾತ್ಮಯೆಂದು ಕರೆಯಲ್ಪಡುತ್ತಿದ್ದಾನೆ. ಮೂರನೆ ಆತ್ಮನಾದ ಪರಮಾತ್ಮನೇ ಮೂರುಲೋಕಗಳು ಅಣುಅಣುವಿನಲ್ಲಿ ವ್ಯಾಪಿಸಿ ಈಶ್ವರನೆಂದು ಕರೆಯಲ್ಪಡುತ್ತಿದ್ದಾನೆ."

ಈ ವಿಧವಾಗಿ ಮೂರು ಆತ್ಮಗಳನ್ನು ಕುರಿತು ಭಗವದ್ಗೀತೆ ಬೋಧಿಸುತ್ತಿರುವಾಗ, ಖುರ್‌ಆನ್ ಗ್ರಂಥದಲ್ಲಿ 50ನೇ ಸುರಾದಲ್ಲಿ 17, 18, 21ನೇ ಆಯತ್‌ನಲ್ಲಿ ಹೀಗೆ ಹೇಳಲಾಗಿದೆ (17) ಪ್ರತಿ ವ್ಯಕ್ತಿ ಹತ್ತಿರ ಇಬ್ಬರಿರುತ್ತಾರೆ. ಒಬ್ಬರು ಬಲಗಡೆ, ಮತ್ತೊಬ್ಬರು ಎಡಗಡೆ ಇದ್ದಾರೆ. (18) ಬಾಯಿಮಾತು ಹೊರಬೀಳದ ಮೊದಲೆ ಆತನ ಹತ್ತಿರವಿರುವ ಪರ್ಯವೇಕ್ಷಕನು ಅದನ್ನು ನಮೂದಿಸಿ ಭದ್ರಪಡಿಸುವುದಕ್ಕೆ ಸಿದ್ಧವಾಗಿರುತ್ತಾನೆ. (21) ಪ್ರತಿ ವ್ಯಕ್ತಿ ಒಬ್ಬ ಓಡಿಸುವವನೊಂದಿಗೆ, ಒಬ್ಬ ಸಾಕ್ಷಿಕೊಡುವವನೊಂದಿಗೆ ಸಹ ಹಾಜರಾಗುತ್ತಾನೆ.

17ನೇ ವಾಕ್ಯದಲ್ಲಿ ಪ್ರತಿ ವ್ಯಕ್ತಿಯಲ್ಲಿ ಮೂವರಿರುವಂತೆ ತಿಳಿಯುತ್ತಿದೆ. 18ನೇ ವಾಕ್ಯದಲ್ಲಿ ಅವರಲ್ಲಿ ಜೀವಾತ್ಮ ಯಾವ ತಪ್ಪುಮಾಡಿದರೂ ಅವನನ್ನು ನಮೂದು ಮಾಡಿಕೊಳ್ಳುವ ಪರ್ಯವೇಕ್ಷಕನು ಒಬ್ಬನಿದ್ದಾನೆಂದು ಹೇಳುವುದರಿಂದ ಆ ಪರ್ಯವೇಕ್ಷಕನೇ ಎಲ್ಲಾ ಕೆಲಸಗಳು ಮಾಡುವ ಆತ್ಮಯೆಂದು ತಿಳಿಯುತ್ತಿದೆ. ಮತ್ತೊಬ್ಬರಾದ ಪರಮಾತ್ಮ ಏನು ಮಾಡದವನೆಂದು ತಿಳಿಯುತ್ತಿದೆ. 21ನೇ ವಾಕ್ಯದಲ್ಲಿ ಪ್ರತಿ ವ್ಯಕ್ತಿ (ಪ್ರತಿ ಜೀವಿಯು) ಒಬ್ಬ ಓಡಿಸುವವನೊಂದಿಗೆ (ಒಬ್ಬ ನಡೆಸುವ ಆತ್ಮನೊಂದಿಗೆ) ಒಬ್ಬ ಸಾಕ್ಷಿಕೊಡುವವನೊಂದಿಗೆ (ಒಬ್ಬ

ಪರಮಾತ್ಮನೊಂದಿಗೆ) ಹಾಜರಾಗುತ್ತಾನೆ (ಭೂಮಿಮೇಲೆ ಜನ್ಮಿಸುತ್ತಾನೆ) ಎಂದು ಇದೆ. ಇದನ್ನೆಲ್ಲಾ ಗಮನಿಸಿದರೆ, ಭಗವದ್ಗೀತೆಯಲ್ಲಿ ಹೇಳಿದಂತೆ ಒಂದು ಶರೀರದಲ್ಲಿ ಮೂರು ಆತ್ಮಗಳು ಇವೆಯೆಂದು ಹೇಳುವುದೇ ಮುಖ್ಯ ಉದ್ದೇಶವೆಂದು ತಿಳಿಯುತ್ತಿದೆ. ಪ್ರತಿ ಶರೀರವನ್ನು ನಡೆಸುವವನು ಆತ್ಮಯೆಂದು, ಸಾಕ್ಷಿಯಾಗಿರುವವನು ಪರಮಾತ್ಮಯೆಂದು ಮೊದಲೆ ಹೇಳಿಕೊಂಡಿದ್ದೇವೆ. ಯಾವುದೊ ಒಂದು ವಿಧವಾಗಿ ಸುರಾ 50ರಲ್ಲಿ 17, 18, 21 ವಾಕ್ಯಗಳಲ್ಲಿ ಮೂರು ಆತ್ಮಗಳನ್ನು ಕುರಿತು ಹೇಳಿರುವಾಗ, ಅದನ್ನು ಮುಸ್ಲಿಮ್‌ರು ಸ್ವಲ್ಪವೂ ಅರ್ಥಮಾಡಿಕೊಳ್ಳದೆ ಮತ್ತೊಂದು ವಿಧವಾಗಿ ಅರ್ಥಮಾಡಿಕೊಳ್ಳುವುದು ಆಶ್ಚರ್ಯ. ಹಾಗೆ ಹಿಂದೂಗಳಾದವರಲ್ಲಿ ಸ್ವಾಮಿಗಳು, ಗುರುಗಳಾದವರಿಗೆ ಸಹ ಮೂರು ಆತ್ಮಗಳ ವಿಷಯ ಅರ್ಥ ಆಗದಿರುವುದು ಮತ್ತಷ್ಟು ಆಶ್ಚರ್ಯ. ನಾವು ಗೀತೆಯಲ್ಲಿ ಹೇಳಿದ ಮೂವರು ಪುರುಷರನ್ನು (ಮೂರು ಆತ್ಮಗಳನ್ನು) ಕುರಿತು ಹೇಳುತ್ತಾ ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸಿದರೆ, ಕ್ರೈಸ್ತವರಲ್ಲಿನ ತ್ರಿತ್ವವನ್ನು (ತ್ರಿಯನ್ನು) ಬೋಧಿಸುತ್ತಿದ್ದೇವೆಂದು ಹಿಂದೂಗಳಾದವರೇ ನಮ್ಮನ್ನು ಕ್ರೈಸ್ತವರಾಗಿ ಆರೋಪಣೆ ಮಾಡುವುದು ವಿಡ್ಡೂರ.

ಸೃಷ್ಟಿ ಆದಿಯಲ್ಲಿ ದೇವರು ಮಹಾಭೂತವಾದ ಆಕಾಶದ ಮೂಲಕ ಶಬ್ದ ರೂಪದಿಂದ ತಿಳಿಸಿದ ಜ್ಞಾನವನ್ನು ಆದಿಯಲ್ಲಿಯೇ ಸೂರ್ಯನು ಮನುವಿಗೆ ತಿಳಿಸಿದಾಗ, ಅದೇ ಜ್ಞಾನವನ್ನೇ ಐದುಸಾವಿರ ವರ್ಷಗಳ ಪೂರ್ವದಲ್ಲಿ ಭಗವಂತನು ಅರ್ಜುನನಿಗೆ ತಿಳಿಸಿದ್ದಾನೆ. ಈ ವಿಧವಾಗಿ ಭಾರತದೇಶದಲ್ಲಿ ದೇವರ ಜ್ಞಾನ ತಿಳಿಯಲ್ಪಟ್ಟಾಗ, ಅದೇ ದೇವರ ಜ್ಞಾನವೇ ಜಿಬ್ರಯೇಲ್ ಮೂಲಕ ಮುಹಮ್ಮದ್ ಪ್ರವಕ್ತರಿಗೆ ಹೇಳಲಾಗಿದೆ. ಒಂದೇ ದೇವರ ಜ್ಞಾನ ಹೇಳುವುದರಿಂದ ಅದೇ ಜ್ಞಾನವೇ ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 16, 17 ಶ್ಲೋಕಗಳಲ್ಲಿ ಮೂವರು ಪುರುಷರಾಗಿ ಹೇಳಲ್ಪಟ್ಟಾಗ, ಮೂವರ ಪುರುಷರ ಜ್ಞಾನವೇ ಖುರಾನ್‌ನಲ್ಲಿ 50ನೇ ಸುರಾದಲ್ಲಿ 17, 18, 21 ಆಯತ್‌ಗಳಲ್ಲಿ

ಹೇಳುತ್ತಾ, ಪ್ರತಿ ಮನುಷ್ಯನ ಹತ್ತಿರ ಒಬ್ಬನು ಪಾಪವನ್ನು ಬರೆದುಕೊಳ್ಳುವವನಾಗಿ, ಮತ್ತೊಬ್ಬನು ಸಾಕ್ಷಿಯಾಗಿದ್ದಂತೆ ಹೇಳಿದ್ದಾರೆ. ಆದರೂ ಸೃಷ್ಟ್ಯಾದಿಯಿಂದ ದೇವರು ಇಂತಹ ಮೂವರು ಪುರುಷರನ್ನು ಕುರಿತು (ಮೂರು ಆತ್ಮಗಳನ್ನು ಕುರಿತು) ಹೇಳುತ್ತಿದ್ದಾನೆಂದು ಇತ್ತ ಹಿಂದುಗಳಾಗಲಿ, ಅತ್ತ ಮುಸ್ಲಿಮ್‌ರಾಗಲಿ ತಿಳಿಯಲಾರದೆ ಹೋಗಿದ್ದಾರೆ. ಈ ವಿಷಯ ಕೊನೆಗೆ ಕ್ರೈಸ್ತರಿಗೂ ಸಹ ತಿಳಿಯದಂತೆ ಹೋಗಿದೆ. ತ್ರಿತ್ವವೆಂದು ಅವರ ಸಮಾಜದಲ್ಲಿ ಇದ್ದರೂ ಅವರು ದೇವರ ಜ್ಞಾನಕ್ಕೆ ಬೇರೆಯಾಗಿ ಹೇಳಿಕೊಂಡಿದ್ದಾರೆ. ಅವರು ಹೇಳಿಕೊಂಡ ತ್ರಿತ್ವವು ದೇವರು ಹೇಳಿದ ಮೂರು ಆತ್ಮಗಳಿಗೆ ಸಂಬಂಧವಿಲ್ಲ. ತಂದೆ, ಕುಮಾರನು, ಪರಿಶುದ್ಧಾತ್ಮಯೆಂದು ಅವರು ಹೇಳಿದರೂ ತಂದೆ, ಪರಿಶುದ್ಧಾತ್ಮ ಇಬ್ಬರೂ ಒಬ್ಬರೇ ಆಗುವುದರಿಂದ ಅದು ದ್ವಿತ್ವವೇ ಆಗುತ್ತದೆ. ಅವರ ಬೋಧನೆಯಲ್ಲಿ ಮೂವರು ಪುರುಷರೆಂದಾಗಲಿ, ಮೂರು ಆತ್ಮಗಳೆಂಬ ಭಾವನೆಯಾಗಲಿ ಎಲ್ಲಿಯೂ ಇಲ್ಲ. ಒಟ್ಟಾರೆ ಪ್ರಪಂಚದಲ್ಲಿಯೇ ಮೂರು ಆತ್ಮಗಳ ಜ್ಞಾನ ತಿಳಿಯದಂತೆ ಹೋಗಿದೆ.

ಸೃಷ್ಟಿ ಆದಿಯಿಂದ ಒಂದೇ ಜ್ಞಾನ ಇರುವಾಗ, ಮಧ್ಯದಲ್ಲಿ ಮತಗಳು ಬಂದು ಬೇರೆಬೇರೆ ಜ್ಞಾನ, ಬೇರೆಬೇರೆ ದೇವರು ಎನ್ನುವಂತೆ ಮಾಡಿರುವುದರಿಂದ ನಾವು ನಿಜವಾದ ದೈವ ಭಕ್ತರೆಂದು ಕೆಲವರನ್ನುತ್ತಿರುವಾಗ, ನಮ್ಮದೇ ನಿಜವಾದ ಮತ, ನಮ್ಮದೇ ನಿಜವಾದ ಜ್ಞಾನವೆಂದು ಮತ್ತೆ ಕೆಲವರನ್ನುತ್ತಿದ್ದಾರೆ. ಮತ ಬೇಧಗಳು ಬಂದು ಕೊನೆಗೆ ದೇವರು ಹೇಳಿದ ಜ್ಞಾನವನ್ನು ಮರೆತುಹೋಗಿ, ಅವರವರ ಸ್ವಂತ ಜ್ಞಾನವನ್ನು ದೇವರ ಜ್ಞಾನವಾಗಿ ಹೇಳಿಕೊಳ್ಳುತ್ತಿದ್ದಾರೆ. ಇಲ್ಲದ ನರಕ ಸ್ವರ್ಗಗಳನ್ನು ಕಲ್ಪಿಸಿಕೊಂಡು ಎಲ್ಲೋ ಸ್ವರ್ಗವಿದೆ, ಎಲ್ಲೋ ನರಕವಿದೆಯೆಂದು ಭ್ರಮಿಸುತ್ತಿದ್ದಾರೆ. ದೇವರು ಹೇಳದ ಸ್ವರ್ಗ, ನರಕಗಳನ್ನು ಮನುಷ್ಯ ಊಹಿಸಿಕೊಳ್ಳುತ್ತಿದ್ದಾನೆ. ದೇವರು ಹೇಳಿದ ಸ್ವರ್ಗ ನರಕಗಳು ಇಲ್ಲೇ ಪ್ರತ್ಯಕ್ಷವಾಗಿ ಇದ್ದರೂ ತಿಳಿಯಲಾರದೆ ಹೋಗುತ್ತಿದ್ದಾನೆ. ಸ್ವರ್ಗ, ನರಕ ಎದುರುಗಿದ್ದರೂ ಗ್ರಹಿಸಲಾರದ ಕುರುಡನಂತೆ ಮನುಷ್ಯ ಬದಲಾಗಿಹೋಗಿದ್ದಾನೆ. ದೇವರ ಜ್ಞಾನವನ್ನು ಅದರ ಪ್ರತ್ಯೇಕತೆಯನ್ನು ತಿಳಿಯಲಾರದೆಹೋಗುವುದಲ್ಲದೆ,

ದೇವರು ಇಳಿದುಬಂದು ಹೇಳಿದರೂ, ಹೇಳುವವನು ನನ್ನಂತಹ ಮನುಷ್ಯನೆಂದು ಅವಹೇಳನ ಮಾಡಿ, ಆತನು ಹೇಳಿರುವುದಕ್ಕಿಂತ ನನಗೆ ತಿಳಿದಿರುವುದೇ ದೊಡ್ಡದೆಂದುಕೊಳ್ಳುತ್ತಿದ್ದಾನೆ. ಆದ್ದರಿಂದ ಅಸಲಾದ ಜ್ಞಾನ ಎಲ್ಲಾ ಮತಗಳಲ್ಲಿಯೂ ಬರವಾಗಿಹೋಗಿದೆ ಎಂದು ಹೇಳಬಹುದು. ಇಂತಹ ಪರಿಸ್ಥಿತಿ ಏರ್ಪಟ್ಟಾಗ ದೇವರು ಪುನಃ ತನ್ನ ಜ್ಞಾನವನ್ನು ಪುನರುದ್ಧರಿಸುವನು. ಹಾಗೆ ಪುನರುದ್ಧರಿ ಸುವುದಕ್ಕೆ ಮತ್ತೊಂದುಬಾರಿ ತೆರೆ ಹಿಂಬದಿಯಿಂದ ತನ್ನ ಸೇವಕರಾದ (ದೂತರಾದ) ಗ್ರಹಗಳ ಮೂಲಕವಾದರೂ ಹೇಳಿಸುವನು. ಇಲ್ಲದಿದ್ದರೆ ತಾನೇ ಸ್ವತಃ ವೇಷ ಬದಲಿಸಿಕೊಂಡು ಮಾನವನಾಗಿ ಬಂದು ಎಲ್ಲೋ ಒಂದುಕಡೆ ತನ್ನ ಜ್ಞಾನವನ್ನು ಹೇಳಿಹೋಗುತ್ತಾನೆ. ಹಾಗೆ ಹೇಳಿಹೋಗುವ ಜ್ಞಾನವೇ ಈದಿನ ಭೂಮಿ ಮೇಲಿರುವ ಎಲ್ಲಾ ಮತಗಳಿಗು ಸರಿಯಾದ ಜ್ಞಾನವಾಗುತ್ತದೆ. ಯಾರಿಗೂ ತಿಳಿಯದಂತೆ ಬಂದು ಎಲ್ಲೊ ಒಂದುಕಡೆ ಹೇಳುವ ಜ್ಞಾನವೇ ಸರ್ವ ಪ್ರಪಂಚಕ್ಕೆ ದಾರಿ ತೋರಿಸುತ್ತದೆ. ಕೆಲವರು ದೇವರ ಜ್ಞಾನವನ್ನು ಬೇಗನೇ ಗ್ರಹಿಸಿದರೂ, ಗ್ರಹಿಸದವರು ಬಹಳಜನ ಇದ್ದರೂ, ಕೊನೆಗೆ ಅವರೆಲ್ಲರೂ ಒಂದೇ ದಾರಿಯೊಳಗೆ ಬಂದು ಒಂದೇ ಜ್ಞಾನವನ್ನು ವಿಶ್ವಾಸಿಸಬೇಕಾಗುತ್ತದೆ. ಹೊಸದಾಗಿ ಹೇಳಲಾದ ದೇವರ ಜ್ಞಾನವನ್ನು ಯಾರಾದರೂ ಈ ಜನ್ಮದಲ್ಲಿ ಒಪ್ಪಿಕೊಳ್ಳದೆಹೋದರೂ, ನಂತರ ಜನ್ಮದಲ್ಲಿಯಾದರೂ ಬೇರೆದಾರಿಯಿಲ್ಲದೆ ಒಪ್ಪಿಕೊಳ್ಳುತ್ತಾನೆ. ಮತಗಳಾಗಿ ಸೀಳಿಹೋಗಿ ಬೇರೆಬೇರೆ ಜ್ಞಾನಿಗಳಾಗಿ ವಿಭಜಿ ಸಲ್ಪಟ್ಟವರೆಲ್ಲರು ಒಂದೇ ಜ್ಞಾನವನ್ನು ಆಶ್ರಯಿಸುವ ಕಾಲ ಬರುತ್ತದೆಂದು ಅಂದುಕೊಳ್ಳುತ್ತಿದ್ದೇನೆ.

**ಪ್ರಶ್ನೆ:–** ಭೂಮಿಮೇಲೆ ಧರ್ಮಗಳು ಅಧರ್ಮಗಳಾಗಿ ಬದಲಾದಾಗ, ಮಾಯ ಪ್ರಭಾವದಿಂದ ಅಜ್ಞಾನ ಜ್ಞಾನವಾಗಿ ಚಲಾವಣೆ ಆಗುತ್ತಿರುವಾಗ ನಾನು ಅವತರಿಸಿ ಅಸಲಾದ ದೈವ ಧರ್ಮಗಳನ್ನು ಜ್ಞಾನರೂಪದಲ್ಲಿ ತಿಳಿಸುತ್ತೇನೆಂದು ಹೇಳಿದ್ದಾ ನಲ್ಲವೆ! ಅಂತಹ ಪರಿಸ್ಥಿತಿ ಈಗ ಏರ್ಪಟ್ಟಿದೆ ಎನ್ನುತ್ತೀರಾ? ದೇವರೇ ಭಗವಂತನಾಗಿ ಬಂದು ಹೇಳಿದ ಭಗವದ್ಗೀತೆ ಇರುವಾಗ, ಹಾಗೆ ಬೈಬಲ್

ಗ್ರಂಥ ಇರುವಾಗ, ಮಹಾಜ್ಞಾನಿ ಜಿಬ್ರಾಯೇಲ್ ಹೇಳಿದ ಖುರ್‌ಆನ್ ಗ್ರಂಥವಿರುವಾಗ, ಅವೆಲ್ಲವೂ ದೇವರ ಜ್ಞಾನವನ್ನೇ ದೇವರ ಧರ್ಮಗಳನ್ನೇ ಬೋಧಿಸುತ್ತಿರುವಾಗ ಮತ್ತೊಂದುಬಾರಿ ದೇವರು ಬಂದು ಜ್ಞಾನ ಹೇಳುತ್ತಾನೆಂಬ ನಿಮ್ಮ ಮಾತು ಸರಿಯಾದುದಾ?

**ಉ॥** ದೇವರು ಹೇಳಿದ ಗೀತೆಯಲ್ಲಿಯೂ, ಉಳಿದ ಗ್ರಂಥಗಳಲ್ಲಿಯೂ ದೇವರ ಧರ್ಮಗಳು ಇಲ್ಲವೆಂದು ನಾನು ಹೇಳುತ್ತಿಲ್ಲ. ದೇವರು ಸೃಷ್ಟ್ಯಾದಿಯಲ್ಲಿಯೇ ಧರ್ಮಗಳನ್ನು ಹೇಳಿ ಪ್ರತಿಷ್ಠಿಸಿದ್ದಾನೆ. ಆದರೆ ಇರುವ ಧರ್ಮಗಳು ತಿಳಿಯದಂತೆಹೋಗಿ ಅವುಗಳ ಸ್ಥಾನದಲ್ಲಿ ಅಧರ್ಮಗಳು ವೃದ್ಧಿಯಾದಾಗ, ಪುನಃ ತನ್ನ ಧರ್ಮಗಳನ್ನು ತಿಳಿಸುವುದಕ್ಕೋಸ್ಕರ, ಅಧರ್ಮಗಳನ್ನು ಇಲ್ಲದಂತೆ ಮಾಡುವುದಕ್ಕೋಸ್ಕರ ದೇವರು ಬರುತ್ತೇನೆಂದು ಹೇಳಿದ್ದಾನೆ. ಅಷ್ಟೇಯಾಗಲಿ ತನ್ನ ಧರ್ಮಗಳನ್ನು ಬೋಧಿಸುವ ಗ್ರಂಥಗಳು ಇಲ್ಲವೆಂದು ಆತನು ಸಹ ಹೇಳಲಿಲ್ಲ. ಆತನ ಗ್ರಂಥಗಳಿದ್ದರೂ, ಆ ಗ್ರಂಥಗಳಲ್ಲಿನ ಧರ್ಮಗಳು ಮನುಷ್ಯರಿಗೆ ತಿಳಿಯದಂತೆಹೋಗಿ, ಅವುಗಳ ಸ್ಥಾನದಲ್ಲಿ ಅಧರ್ಮಗಳು ಧರ್ಮಗಳಾಗಿ ಚಲಾವಣೆ ಆಗುತ್ತಿರುವಾಗ ಬರುತ್ತೇನೆಂದು ಹೇಳಿದ್ದಾನೆ. ದೇವರು ಈಸಲ ಪುನಃ ಬಂದರೆ ಇದಕ್ಕು ಮೊದಲು ಹೇಳಿದ ಧರ್ಮಗಳನ್ನೇ ತಿಳಿಸುತ್ತಾ ಆಗ ಹೇಳದೆ ಬಿಟ್ಟಿರುವವುಗಳನ್ನು ಸಹ ತಿಳಿಸುತ್ತಾನೆ. ಬೈಬಲ್ ಗ್ರಂಥದಲ್ಲಿ ಸಹಾ ಇದೇ ವಿಷಯವನ್ನು ಹೇಳುತ್ತಾ ಆದರಣಕರ್ತನಾಗಿ ಬರುವವನು ಈಗಿರುವ ಜ್ಞಾನವನ್ನೇ ಅಲ್ಲದೆ ಇನ್ನೂ ಹೇಳದೆ ಬಿಟ್ಟಿರುವ ಸಮಸ್ತ ಜ್ಞಾನವನ್ನು ತಿಳಿಸುತ್ತಾನೆಂದು ಯೋಹಾನ್ ಸುವಾರ್ತೆ 16ನೇ ಅಧ್ಯಾಯದಲ್ಲಿ 12, 13, 14 ವಾಕ್ಯಗಳಲ್ಲಿ ಹೇಳಿದ್ದಾರೆ. ಆ ಮಾತಿನ ಪ್ರಕಾರ ಬರುವಂತಹ ದೇವರು ಯಾವಾಗ ಬಂದರೂ ಮೊದಲ ಗ್ರಂಥಗಳಲ್ಲಿನ ವಿಷಯಗಳನ್ನೇ ಅಲ್ಲದೆ ಇನ್ನೂ ಆಗ ಹೇಳದವುಗಳನ್ನು ಸಹ ಹೇಳಿಹೋಗುತ್ತಾನೆ. ಆಗ ಸಮಸ್ತ ಜನರು ಎಲ್ಲಾ ಮತದವರು ಏಕ ಜ್ಞಾನದೊಳಗೆ ಬಾರದೆ ತಪ್ಪುವುದಿಲ್ಲ. ಇದು ನಡೆಯುವ ಸತ್ಯ.

**ಪ್ರಶ್ನೆ :–** ನೀವು ಯಾವಾಗಲೊ ನಡೆಯುವ ವಿಷಯವನ್ನು ಹೇಳುತ್ತಿದ್ದೀರಾ. ಒಂದುವೇಳೆ ಅಂತಹ ಸಮಯ ಬಂದರೆ, ಎಲ್ಲರೂ ಏಕ ಜ್ಞಾನದೊಳಗೆ ಬಂದರೆ, ಅದಕ್ಕಿಂತ ಒಳ್ಳೆಯಕಾಲ ಮತ್ತೊಂದು ಇರುವುದಿಲ್ಲ. ಆದರೆ ಕೆಲವು ಮತಗಳಲ್ಲಿ ಇದೇ ಕೊನೆಯ ಬೋಧನೆಯೆಂದು ಹೇಳುತ್ತಿದ್ದಾರೆ. ಇಸ್ಲಾಮ್ ಮತದಲ್ಲಿ ಮುಹಮ್ಮದ್ ಪ್ರವಕ್ತ ಕೊನೆಯ ಪ್ರವಕ್ತಯೆಂದು, ಖುರ್‌ಆನ್ ಗ್ರಂಥ ಅಂತಿಮ ದೈವಗ್ರಂಥವೆಂದು ಹೇಳುತ್ತಿದ್ದಾರಲ್ಲ! ಖುರ್‌ಆನ್ ಅಂತಿಮ ದೈವಗ್ರಂಥವಾದಾಗ, ಮುಹಮ್ಮದ್ ಪ್ರವಕ್ತ ಕೊನೆಯ ಪ್ರವಕ್ತ ಆದಾಗ, ನಂತರ ದೇವರು ಮನುಷ್ಯನಾಗಿ ಬರಬೇಕಾದ ಕೆಲಸವಿಲ್ಲ ಅಲ್ಲವೆ! ಹಾಗೆ ಬಂದರೆ ಮುಹಮ್ಮದ್ ಕೊನೆಯ ಪ್ರವಕ್ತ ಎನ್ನುವುದಕ್ಕೆ ಭಂಗ ಏರ್ಪಡುತ್ತದಲ್ಲವೆ! ಹಾಗೆ ಖುರ್‌ಆನ್ ಗ್ರಂಥ ಅಂತಿಮ ಗ್ರಂಥ ಆಗದಂತೆ ಹೋಗುತ್ತದಲ್ಲವೆ! ಇದಕ್ಕೆ ನೀವೇನನ್ನುತ್ತೀರಾ?

**ಉ॥** ಖುರ್‌ಆನ್ ಎಂದಿಗೂ ಅಂತಿಮ ದೈವಗ್ರಂಥವೇ, ಆ ಮಾತನ್ನು ಪ್ರಪಂಚದಲ್ಲಿ ಯಾರೂ ಅಲ್ಲವೆನ್ನುವುದಿಲ್ಲ. ಭೂಮಿಮೇಲೆ ತಿಳಿಯದಂತೆ ಹೋಗಿರುವ ಧರ್ಮಗಳು ಪುನಃ ತಿಳಿಯುವುದಕ್ಕೆ ದೇವರು ಮನುಷ್ಯನಾಗಿ (ದೂತನಾಗಿ) ಬಂದರೂ, ಭೂಮಿಮೇಲೆ ಧರ್ಮಗಳು ಪುನರುದ್ಧರಿಸಲ್ಪಟ್ಟರೂ, ತಿಳಿಯದಂತೆ ಹೋಗಿರುವ ಧರ್ಮಗಳು ತಿಳಿಯಲ್ಪಟ್ಟು ಮನುಷ್ಯ ಸಂಪೂರ್ಣ ಜ್ಞಾನಿಯಾಗಿ ಬದಲಾದರೂ, ಖುರ್‌ಆನ್ ಅಂತಿಮ ದೈವಗ್ರಂಥ ಎನ್ನುವುದರಲ್ಲಿ ಯಾವ ಬದಲಾವಣೆ ಇರುವುದಿಲ್ಲ. ಖುರ್‌ಆನ್ ಶಾಶ್ವತವಾಗಿ ಅಂತಿಮ ದೈವಗ್ರಂಥವೆಂದು ದೊಡ್ಡ ಜ್ಞಾನಿಗಳು ಸಹ ಅನ್ನಬೇಕಾಗಿದೆ. ಏಕೆಂದರೆ! ಸೃಷ್ಟ್ಯಾದಿಯಲ್ಲಿ ವಾಣಿ ಮೂಲಕ ದೇವರು ಜ್ಞಾನ ತಿಳಿಸಿದಾಗ ಆ ದಿನ ಗ್ರಹಗಳಾದ ಸೂರ್ಯನು, ಜಿಬ್ರಯೇಲ್ ದೇವರು ತಿಳಿಸಿದ ಜ್ಞಾನವನ್ನು ತಿಳಿದಿದ್ದಾರೆ. ಸೂರ್ಯನ ಮೂಲಕ ಸೃಷ್ಟ್ಯಾದಿಯಲ್ಲಿಯೇ ಭೂಮಿಮೇಲೆ ಜ್ಞಾನ ತಿಳಿಯಲ್ಪಟ್ಟಿದೆ. ಸೂರ್ಯನು ಮೊದಲು ಭೂಮಿಮೇಲಿರುವ ಮನುವಿಗೆ ಜ್ಞಾನವನ್ನು ತಿಳಿಸಿದಾಗ, ಮನುವಿನ ಮುಖಾಂತರ ಇಕ್ಷ್ವಾಕನು ಎಂಬ ರಾಜನು ತಿಳಿದುಕೊಂಡಿದ್ದಾನೆ. ಇಕ್ಷ್ವಾಕನ

ಮುಖಾಂತರ ಉಳಿದ ಪ್ರಜೆಗಳು ತಿಳಿದುಕೊಂಡಿದ್ದಾರೆ. ಹೀಗೆ ಭೂಮಿಮೇಲೆ ಮೊದಲು ಮನುಷ್ಯರೆಲ್ಲರಿಗೂ ಜ್ಞಾನ ತಿಳಿಯಲ್ಪಟ್ಟಿದೆ. ಹಾಗೆ ತಿಳಿಯಲ್ಪಟ್ಟ ಮೊದಲ ಜ್ಞಾನವೇ ಐದುಸಾವಿರ ವರ್ಷಗಳ ಪೂರ್ವದಲ್ಲಿ ಶ್ರೀಕೃಷ್ಣನ ಮೂಲಕ ಅರ್ಜುನನಿಗೆ ಹೇಳಲಾಗಿದೆ. ಅದೇ ವ್ಯಾಸನ ಮುಖಾಂತರ ಭಗವದ್ಗೀತೆಯಾಗಿ ಬರೆಯಲ್ಪಟ್ಟಿದೆ. ಆದ್ದರಿಂದ ಭಗವದ್ಗೀತೆ ಪ್ರಪಂಚದಲ್ಲಿ ಮೊದಲ ದೈವಗ್ರಂಥ ವಾಗಿದೆ. ಮಾತುಗಳ ರೂಪದಲ್ಲಿ ತಿಳಿಸಲಾದ ಗೀತೆಯನ್ನು ಅಕ್ಷರ ರೂಪದಲ್ಲಿ ಬರೆದು ಪ್ರಜೆಗಳಿಗೆ ತಿಳಿಸಿದ ವ್ಯಾಸನನ್ನು ಮೊದಲ ಪ್ರವಕ್ತನೆಂದು ಹೇಳಬಹುದು. ಇನ್ನು ಇಂದಿಗೆ ಹದಿನಾಲ್ಕು ನೂರು ವರ್ಷಗಳ ಪೂರ್ವದಲ್ಲಿ ಜಿಬ್ರಯೇಲ್ ದೂತ ಹೀರಾ ಗುಹೆಯಲ್ಲಿ ಮುಹಮ್ಮದ್ ಪ್ರವಕ್ತರಿಗೆ ದೈವಜ್ಞಾನವನ್ನು ತಿಳಿಸಿದ್ದಾನೆ. ಜಿಬ್ರಯೇಲ್ ತಿಳಿಸಿದ ಜ್ಞಾನವನ್ನು ಮುಹಮ್ಮದ್ ಪ್ರವಕ್ತರು ಪ್ರಜೆಗಳಿಗೆ ಖುರ್‌ಆನ್ ರೂಪದಲ್ಲಿ ಒದಗಿಸಿ ಕೊಟ್ಟಿದ್ದಾನೆ. ಹಾಗೆ ಜಿಬ್ರಯೇಲ್ ಹೇಳಿದ ಜ್ಞಾನ ಖುರಾನ್ ಎನ್ನುವ ಗ್ರಂಥ ರೂಪವಾಗಿದೆ. ಮೊದಲು ಹೇಳಿದ ಜ್ಞಾನವೇ ಖುರ್‌ಆನ್‌ನಲ್ಲಿ ಇರುವುದರಿಂದ, ಭಗವದ್ಗೀತೆ ನಂತರ ಬಂದಿರುವ ಜ್ಞಾನ ಖುರ್‌ಆನ್ ಆಗಿರುವುದರಿಂದ, ಗೀತೆ ಮೊದಲ ದೈವಗ್ರಂಥವಾದಾಗ, ಖುರ್‌ಆನ್ ಅಂತಿಮ ದೈವಗ್ರಂಥವಾಗಿದೆ. ಮೊದಲು ಹೇಳಿರುವುದು ಎಂದಿಗೂ ಮೊದಲನೆಯದೆ. ನಂತರ ಮೊದಲನೆಯದಕ್ಕೆ ಸಮಾನವಾಗಿ ಹೇಳಿರುವುದು ಖುರ್‌ಆನ್ ಹೊರತು ಯಾವ ಗ್ರಂಥವೂ ಇಲ್ಲ ಆದಕಾರಣ ಖುರ್‌ಆನ್ ಅಂತಿಮ ದೈವಗ್ರಂಥವಾಗಿದೆ. ಮೊದಲನೆಯದು ಮತ್ತು ಕೊನೆಯದು ಒಂದೇ ಜ್ಞಾನವಾದ್ದರಿಂದ ಮೊದಲು ಹೇಳಿರುವುದು ಪ್ರಥಮ ದೈವಗ್ರಂಥವೆಂದು ನಂತರ ಹೇಳಿರುವುದು ಅಂತಿಮ ದೈವಗ್ರಂಥವೆಂದು ಹೆಸರುವಾಸಿಯಾಗಿದೆ. ಈ ಎರಡಕ್ಕೂ ಸಮನ್ವಯವಿದೆ ಆದ್ದರಿಂದ ಹಾಗೆ ಹೇಳುವುದು ನಡೆದಿದೆ. ಸುರಾ 12ರಲ್ಲಿ 111ನೇ ಆಯತ್‌ನಲ್ಲಿ "ಖುರಾನ್‌ನಲ್ಲಿ ಹೇಳುತ್ತಿರುವ ಇವೆಲ್ಲ ಕಲ್ಪಿತ ವಿಷಯಗಳು ಅಲ್ಲ. ವಾಸ್ತವಕ್ಕೆ ಇವು ಇಲ್ಲಿಯವರೆಗು ಬಂದಿರುವ ಗ್ರಂಥಗಳಿಗೆ ಧೃಡೀಕರಣ" ಎಂದು ಇದೆ. ಈ ಮಾತಿನಿಂದ ಭಗವದ್ಗೀತೆಯಲ್ಲಿನ ಜ್ಞಾನ ವಿಷಯಗಳು ಖುರ್‌ಆನ್ ಗ್ರಂಥದಲ್ಲಿ

ಸಹ ಇವೆಯೆಂದು ತಿಳಿಯುತ್ತಿದೆ. ದೇವರು ಹೇಳಿದ ಭಗವದ್ಗೀತೆಯನ್ನು ಅನುಸರಿಸಿಯೇ ಖುರ್‌ಆನ್ ಇದೆಯೆಂದು, ಎರಡರಲ್ಲಿರುವುದು ಸೃಷ್ಠಿ ಆದಿಯಲ್ಲಿ ದೇವರು ಹೇಳಿದ ಜ್ಞಾನವೇ ಎಂದು ತಿಳಿಯುತ್ತಿದೆ. ಎರಡು ಗ್ರಂಥಗಳಲ್ಲಿನ ಜ್ಞಾನವನ್ನು ಪ್ರಜೆಗಳು ಅರ್ಥ ಮಾಡಿಕೊಳ್ಳದಿರುವಾಗ, ದೇವರು ಅವತರಿಸಿ ಗ್ರಂಥಗಳಲ್ಲಿರುವ ಧರ್ಮಗಳನ್ನೇ ಪುನರುದ್ಧರಿಸಿ ಹೋಗುತ್ತಾನಾಗಲಿ ಇವುಗಳನ್ನು ಅಲ್ಲವೆಂದು ಬೇರೆ ಜ್ಞಾನವನ್ನು ಹೇಳುವುದಿಲ್ಲ. ದೇವರು ಮೊದಲು ಹೇಳಿದ ಜ್ಞಾನ ಮುಂದೆ ಹಿಂದೆ ತಿಳಿದಿರುವುದರಿಂದ ಅವುಗಳಿಗೆ ಮೊದಲ ಗ್ರಂಥ ಕೊನೆಯ ಗ್ರಂಥವೆಂದು ಹೆಸರು ಬಂದಿದೆಯಾಗಲಿ, ಅದರಲ್ಲಿನ ಜ್ಞಾನ ಬೇರೆಯೆಂದುಕೊಳ್ಳಬಾರದು. ದೇವರು ಯಾವಾಗ ಬಂದು ಹೇಳಿದರೂ ತಾನು ಮೊದಲು ಹೇಳಿದವುಗಳನ್ನೇ ಪುನಃ ಪ್ರತಿಷ್ಠಿಸುವುದಕ್ಕೆ ಬರುತ್ತಾನಾಗಲಿ ತಾನು ಮೊದಲು ಹೇಳಿದ ಜ್ಞಾನವನ್ನು ಅಲ್ಲವೆನ್ನುವುದಕ್ಕಲ್ಲ. ದೇವರು ಬಂದು ಧರ್ಮಗಳನ್ನು ಸಂಸ್ಥಾಪಿಸುವುದರಿಂದ ಪೂರ್ವದ ಗ್ರಂಥಗಳಾದ ಮೊದಲ ಕೊನೆಯ ಗ್ರಂಥಗಳಲ್ಲಿನ ಧರ್ಮಗಳು ಚೆನ್ನಾಗಿ ಅರ್ಥವಾಗುತ್ತವೆ. ಆದ್ದರಿಂದ ಎಷ್ಟುಕಾಲ ಕಳೆದರೂ ಆದಿ ಅಂತ್ಯ ದೈವಗ್ರಂಥಗಳು ಎಂದಿಗೂ ಶಾಶ್ವತವಾಗಿ ಇರುತ್ತವೆ. ಪುನಃ ದೇವರು ಬಂದು ತಿಳಿಸುವುದು ಈ ಆದಿ ಅಂತ್ಯ ಗ್ರಂಥಗಳ ಜ್ಞಾನವೇ ಎಂದು ತಿಳಿಯಬೇಕು.



**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅಗತ್ಯವೊ, ಹಾಗೆ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರ ಅಷ್ಟೇ ಅಗತ್ಯವಾಗುತ್ತದೆ.**



**ಅಸತ್ಯವನ್ನು ಸಾವಿರಜನ ಹೇಳಿದರೂ ಅದು ಸತ್ಯ ಆಗುವುದಿಲ್ಲ,**
**ಸತ್ಯವನ್ನು ಸಾವಿರಜನ ಅಲ್ಲ ಎಂದರೂ ಅದು ಅಸತ್ಯ ಆಗುವುದಿಲ್ಲ.**

ಪ್ರಮುಖರ ಲೇಖೆ



# ಇಂದೂ ದೇಶವೇ ಇಂಡಿಯಾ!

ಹಿಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)

▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

---

**visit website : www.thraithashakam.org**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




## ಇಂದೂ ಜ್ಞಾನವೇದಿಕೆ (I.G.V)

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಐಕ್ಯೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ







**ಸುವಾರ್ತ ಕ್ರೈಸ್ತವ ಸಂಘ (S.K.S)**

(Regd.No.: 159/2015)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org



*www. suvarthakraisthavasangham.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ




(Regd.No.459/20111)

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಪ್ರಬೋಧ ಸೇವಾ ಸಮಿತಿ




## ಪ್ರಬೋಧ ಸೇವಾ ಸಮಿತಿ (P.S.S.)

(Regd.No.: 304/1991)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

*www. thraithashakam.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ (D.S.S)**

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),

ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ–509381

e-mail id : info@dravidashreshtisangham.org

***www.dravidashreshtisangham.org***

# ಪ್ರವಕ್ತರು ಯಾರು?



Author :

The Only Guru of Three Religions
The Spiritual Emperor, Thraitha Theorem Originator
Sri Acharya Prabodhananda Yogeeshwarulu

www.thraithashakam.org